

# ಸಿದ್ಧಗಂಗಾ



ಆಗಸ್ಟ್ ೨೦೦೦



ರಾಜಕೀಯ ಭೀಷ್ಮ, ಕರ್ಮಯೋಗಿ

## ಶ್ರೀ ಸಿದ್ಧವನಹಳ್ಳಿ ನಿಜಲಿಂಗಪ್ಪ







|| ಓಂ ಶ್ರೀ ಗುರು ಬಸವ ಲಿಂಗಾಯನಮಃ ||

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೩೬ ಆಗಸ್ಟ್ ೨೦೦೦ ಸಂಚಿಕೆ : ೮





**ಮುದ್ರಕರು :**
ಗೀತಾಂಜಲಿ ಎಂಟರ್‌ಪ್ರೈಸಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೦೮೭




## ಒಳಪುಟಗಳಲ್ಲಿ ......




| ವಿಳಾಸ : | ಚಂದಾ ವಿವರ : |
|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,<br>ಶ್ರೀ ಸಿದ್ಧಗಂಗಾ ಮಠ,<br>ತುಮಕೂರು ಜಿಲ್ಲೆ-೫೭೨ ೧೦೪ | ವಾರ್ಷಿಕ ಚಂದಾ ರೂ. ೬೦.<br>ಆಜೀವ ಸದಸ್ಯತ್ವ ರೂ. ೫೦೦.<br>ಬಿಡಿ ಪ್ರತಿ ರೂ. ೫.೦೦ |

## ಸ್ವಾತಂತ್ರ್ಯ ದಿನಾಚರಣೆ, ಶ್ರೀ ಎಸ್. ನಿಜಲಿಂಗಪ್ಪ ಮತ್ತು ಡಾ. ರಾಜಕುಮಾರ್

ಐವತ್ಮೂರು ವರ್ಷಗಳಾಯಿತು ಸ್ವಾತಂತ್ರ್ಯಬಂದು. ಭಾರತೀಯರು ಮಾನವಂತರಾಗಿ, ಗೌರವದಿಂದ ವಿಶ್ವದಲ್ಲಿ 'ತಲೆಯೆತ್ತಿ' ಬಾಳಲೆಂದು ಹಿರಿಯರು, ದೇಶವೇ ದೇವರೆಂದು ನಂಬಿ ನಡೆದ ಉದಾರ ಚರಿತರು ಸ್ವಾತಂತ್ರ್ಯ ತಂದುಕೊಟ್ಟರು. ಅವರಲ್ಲಿ ಬಹಳಮಂದಿ ಇಂದು ನಮ್ಮ ಮಧ್ಯೆಯಿಲ್ಲ. ಇರುವ ಕೆಲವೇ ಮಂದಿಯ 'ಮಾತು' ಲೆಕ್ಕಕ್ಕಿಲ್ಲ. ದುಡಿದವರಿಗೆ ಗೊತ್ತು ದುಡ್ಡಿನ ಬೆಲೆ ಎಂಬ ಮಾತೊಂದಿದೆ. ಅಂತೆಯೇ ಸ್ವಾತಂತ್ರ್ಯ ಗಳಿಸಲು ಪಟ್ಟಶ್ರಮ, ತೆತ್ತ ಬೆಲೆ, ಕೊಟ್ಟ ಜೀವಗಳಿಗೆ ಲೆಕ್ಕ ಇಡಲಿಲ್ಲ. ಸ್ವಾತಂತ್ರ್ಯದ ಅರ್ಥವನ್ನೇ ಅರಿಯದ ಜನಸಂಪತ್ತು ಇಂದು ನೂರುಕೋಟಿ ತಲುಪಿದೆ. ಮನಬಂದಂತೆ ವರ್ತಿಸುವ ಮನೋಧರ್ಮ ವಿಜೃಂಭಿಸಿದೆ. ಸ್ವಾತಂತ್ರ್ಯದ ಹೆಸರಿನಲ್ಲಿ ಆಗಬಾರದ್ದೆಲ್ಲಾ ಆಗುತ್ತಿದೆ. ಜವಾಬ್ದಾರಿಯ ಸ್ಥಾನಗಳಲ್ಲಿರುವವರ ನಡೆ-ನುಡಿಗಳಲ್ಲಿ ಪ್ರಾಮಾಣಿಕತೆಯಿಲ್ಲ, ಪ್ರತಿಷ್ಠೆ ಪ್ರದರ್ಶನದ ಭ್ರಮೆಯಲ್ಲಿ ದೇಶದ ಋಣಭಾರದಡಿಯಲ್ಲಿ ನರಳುತ್ತಿದೆ. ಸಾವಿರ ಸಾವಿರ ಕೋಟಿ ರೂಪಾಯಿಗಳಷ್ಟು ಬಡ್ಡಿ ತೆರುವ ಅಭಿವೃದ್ಧಿಯಾಗಿದೆ. ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳಲ್ಲಿ ಭ್ರಷ್ಟಭಂಡರು ನುಸುಳಿ ಜನತೆ ನಂಬಿಕೆಯನ್ನೇ ಕಳೆದುಕೊಳ್ಳುವಂತಾಗಿದೆ. ಭ್ರಷ್ಟಾಚಾರದ ಮುಳ್ಳುಜಾಲಿಯನ್ನು ಎಲ್ಲೆಲ್ಲೂ ಬೆಳೆಯಲಾಗಿದೆ. ಭಾರತೀಯ ಜೀವನವಿಧಾನಕ್ಕೆ ಎಳ್ಳುನೀರು ಬಿಡುತ್ತಿರುವ ದಂಧೆಯಲ್ಲಿ ಯಾರೂ ಹಿಂದೆಬಿದ್ದಿಲ್ಲ. ಯುವಜನಾಂಗ ಹತಾಶೆಯ ಪ್ರಪಾತದತ್ತ ಧಾವಿಸುತ್ತಿದ್ದಾರೆ. ರೈತ ಆತ್ಮಹತ್ಯೆ ಮಾಡಿಕೊಳ್ಳುವ ಪರಿಸ್ಥಿತಿ ನಿರ್ಮಾಣವಾಗಿದೆ. 'ಧರೆ ಹೊತ್ತಿ ಉರಿಯುತ್ತಿದೆ', 'ಬಡವರ ಬಗ್ಗರ ತುತ್ತಿನ ಚೀಲ' ತುಂಬುವ ಸ್ಥಿತಿ ಉಂಟಾಗಿಲ್ಲ. ಕೋಟಿ ಕೋಟಿ ರೂಪಾಯಿಗಳ ಕಪ್ಪುಹಣ ಝಣ ಝಣ ರಿಂಗಣ ಕುಣಿತ ನಡೆದಿದೆ. ದುಡಿಯುವ ಪ್ರವೃತ್ತಿಯೇ ಮಾಯವಾಗಿದೆ. ಕುಳಿತು ಉಣ್ಣುವ, ಬಣ್ಣದ ಮಾತಿನಲ್ಲಿ ದೇಶ ಕಟ್ಟುವವರ ಸಂಖ್ಯೆ ರಕ್ತ ಬೀಜಾಸುರನ ಸಂತತಿಯಂತೆ ಬೆಳೆಯುತ್ತಿದೆ. ಆಗಸ್ಟ್ ಹದಿನೈದು ಸ್ವಾತಂತ್ರ್ಯದ ದಿನಾಚರಣೆ ನಾಟಕ ನಡೆದಿದೆ. ಕಾಶ್ಮೀರದ ಸಮಸ್ಯೆ, ರಾಜ್ಯಗಳ ಗಡಿಸಮಸ್ಯೆ, ನ್ಯಾಯಪೀಠಗಳ ಸ್ಥಾಪನೆಯ ಸಮಸ್ಯೆ, ಶಾಲಾಕಾಲೇಜುಗಳ ವೇಳಾ ಬದಲಾವಣೆ ಸಮಸ್ಯೆ ಪ್ರತಿಷ್ಠೆಯ ಸಮಸ್ಯೆಗಳಾಗಿ ಕಾಡುತ್ತಿವೆ. ಅಕ್ಷರ ರಾಕ್ಷಸರ ನಿರ್ಮಾಣ ಹುಲುಸಾಗಿ ಬೆಳೆಯುತ್ತಿದೆ. ಮಾನವೀಯತೆ ಮಣ್ಣುಮುಕ್ಕುತ್ತಿದೆ. ಸ್ವಾತಂತ್ರ್ಯವನ್ನು ಇದಕ್ಕಾಗಿ ಹಿರಿಯರು ತಂದುಕೊಟ್ಟರೆ? ಅವರ ಆತ್ಮಗಳಿಂದು ಇದನ್ನೆಲ್ಲ ಕಂಡು ಕಣ್ಣೀರು ಬಿಡುತ್ತಿವೆಯಲ್ಲಾ ಎಂಬುದು ನಮಗೇಕೆ ಅರ್ಥವಾಗುತ್ತಿಲ್ಲ? ಸುಳ್ಳಿನ ಸಂತೆ ನಡೆದಿದೆ, ಕೊಳ್ಳುವವರು, ಮಾರುವವರು ಎಲ್ಲ ಸುಳ್ಳಿನ ಸರದಾರರೇ ಆಗಿರುವ ವ್ಯಂಗ್ಯವಾಗಿದೆ ಸ್ವಾತಂತ್ರ್ಯ ದಿನಾಚರಣೆ.

**ಶ್ರೀ ಎಸ್. ನಿಜಲಿಂಗಪ್ಪ**

ರಾಷ್ಟ್ರಚಿಂತಕ, ಕರ್ನಾಟಕದ ರೂವಾರಿ, ತೊಂಬತ್ತೆಂಟರ ತುಂಬುಜೀವಿ, ಅಪರೂಪದ ಮುತ್ಸದ್ದಿ, ಬಸವಪ್ರಜ್ಞೆಯ ಚಿಂತಕ ಸನ್ಮಾನ್ಯ ಶ್ರೀ ಸಿದ್ಧವನಹಳ್ಳಿ ನಿಜಲಿಂಗಪ್ಪ ಅವರು ಆಗಸ್ಟ್ ೮ರ ರಾತ್ರಿ ನಮ್ಮನ್ನೆಲ್ಲ ಅಗಲಿರುವುದು ರಾಷ್ಟ್ರಕ್ಕೆ ಭರಿಸಲಾಗದ ನಷ್ಟ. ಅವರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಅವರ ಕುಟುಂಬವರ್ಗದವರಿಗೆ ಅವರ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿಯನ್ನು ಪರಮಾತ್ಮನು ಕೊಡಲೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

**ಡಾ|| ರಾಜಕುಮಾರ್**

ಡಾ|| ರಾಜಕುಮಾರ್ ಅಪಹರಣ, ವೀರಪ್ಪನ್ ಮಾಡಿರುವ ಸಾಹಸಗಾಥೆ ಕರ್ನಾಟಕದ ಜಿಲ್ಲೆಗಳಲ್ಲೆಲ್ಲ ವ್ಯಕ್ತವಾಗಿರುವ ಅಭಿಮಾನದ ಮಹಾಪೂರ, ಸರ್ಕಾರದ ಸಂಧಾನ, ಕುಟುಂಬ ವರ್ಗದವರ ಸಹಕಾರ. ಚಲನಚಿತ್ರ ಜಗತ್ತಿನ ತಾರಾಮಣಿಗಳ ಸಲಹೆ, ಸಾರ್ವಜನಿಕರ ಶಾಂತಿಯುತ ನೆರವಿಗಾಗಿ ಪ್ರಾರ್ಥನೆ. ದೇವಾಲಯಗಳಲ್ಲಿ ವಿಶೇಷ ಪ್ರಾರ್ಥನೆ. ಕೇಂದ್ರ ಸರ್ಕಾರದ ಸಹಾಯಹಸ್ತ, ಶಾಲಾ-ಕಾಲೇಜುಗಳಿಗೆ ರಜೆ. ಶಾಂತಿಪಾಲನೆಗಾಗಿ ೧೪೪ನೇ ಸೆಕ್ಷನ್ ಘೋಷಣೆ. ದೂರದರ್ಶನದಲ್ಲಿ ವಿಶೇಷ ಸುದ್ದಿ ಪ್ರಸಾರ, ಪತ್ರಿಕೆಗಳಲ್ಲಿ ಪುಟಗಳು ಅಪಹರಣ ಸುದ್ದಿಯ ಸುತ್ತಮುತ್ತ ಮುದ್ರಿತ 'ಕರ್ನಾಟಕರತ್ನ' ದಾದಾಸಾಹೇಬ್ ಫಾಲ್ಕೆ ಪ್ರಶಸ್ತಿ ವಿಜೇತ, ಕನ್ನಡಿಗರ ಅಭಿಮಾನದ ಡಾ|| ರಾಜಕುಮಾರ್ ಆತಂಕದಿಂದ ಮುಕ್ತವಾಗಿ ಹಿಂದಿರುಗಲಿ ಎಂದು 'ಸಿದ್ಧಗಂಗಾ' ಹಾರೈಸುತ್ತದೆ.

- ಸಂಪಾದಕ





### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಸುಳುಹಿನ ಸೂತಕವಳಿದ ಒಡಲ ಕಳವಳವಳಿದ
ಅರಿವೆ ಅಂಗವಾದ ಜಂಗಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೊನ್ನಿಗೆ ನೀ ಬರಲಿಲ್ಲ ಹೆಣ್ಣಿಗೆ ನೀ ಬರಲಿಲ್ಲ
ಮಣ್ಣಿಗೆ ಬರಲಿಲ್ಲ ಜಂಗಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಃಕಾಮಿ ನಿರ್ಮೋಹಿ ನಿತ್ಯ ನಿರಂಜನವೆ
ಸತ್ಯ ಶಿವರೂಪಿ ಜಂಗಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪೂರ್ವಾಚಾರಿಯುನೀನೆ ಪಾವನ ಪ್ರಮಥನು ನೀನೆ
ಸರ್ವಾಚಾರಿಯೆನಿಪ ಜಂಗಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನಸಾಗರವಾದೆ ಶಾಂತ ಭಾಸ್ಕರನಾದೆ
ಸರ್ವತತ್ವಗಳ ಆಧಾರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸೊಳ್ನುಡಿಯ ಶ್ರೀಶಿವವೆ ಅನುಭಾವದ ಮೌಕ್ತಿಕವೆ
ನಲ್ನುಡಿಯ ಮಂಗಳವೆ ಶ್ರೀ ಮಹವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದೇಹ ದೇವನಿತ್ತ ಪಾವನಸಾಧನವೆಂದೆ
ದೇಹ ದಿವ್ಯದೀಪಮಾಡೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಚಿಲ್ಲಿಂಗವ ತೋರಿದ ಪಿತೃ ದಿವ್ಯವು ನೀನು
ತಲ್ಲಿಂಗವ ಕರಕಿತ್ತ ಪರಶಿವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆತ್ಮಸಂಗಮಗೈದು ಬಾಹ್ಯ ಭಾವವತೊರೆದು
ಇಂದ್ರಿಯ ಲಿಂಗವ ಮಾಡಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸರ್ವಾಶ್ರಯ ಪರಮವೆ ಸರ್ವಕಾರಣ ಗುರುವೆ
ಸರ್ವವ ತುಂಬಿರುವ ಶ್ರೀವಿಭುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ



### ಶ್ರೀವಾಣಿ

## ಸಿದ್ಧಲಿಂಗೇಶ್ವರನ ಕರುಣೆ

ಈ ವರ್ಷ ವಿದ್ಯಾರ್ಥಿಗಳ ಸಂಖ್ಯೆ ಗಣನೀಯವಾಗಿ ಹೆಚ್ಚಿದೆ. ಸಂಸ್ಥೆಯಲ್ಲಿ ಸ್ಥಳಾಭವಾದ ಕೊರತೆಯಿದೆ. ನಾಡಿನ ದೂರದೂರದ ಜಿಲ್ಲೆ-ತಾಲ್ಲೂಕುಗಳಿಂದ ಬಂದಿರುವ ಪೋಷಕರ, ಬಾಲಕರ ದುಃಸ್ಥಿತಿ, ದುರವಸ್ಥೆಗಳನ್ನು ಕಂಡು 'ಪ್ರವೇಶವಿಲ್ಲ' ಎನ್ನಲು ಮನಸ್ಸು ಹಿಂಜರಿಯುತ್ತದೆ. ಚಿಕ್ಕಪುಟ್ಟ ಮಕ್ಕಳನ್ನೂ ಶ್ರೀಮಠಕ್ಕೆ ತಂದೊಪ್ಪಿಸುವ ತಂದೆ-ತಾಯಿಗಳನ್ನು ಕುರಿತು ಚಿಂತನೆ ಮಾಡುವಂತಾಗಿದೆ. ಪುಟ್ಟಮಕ್ಕಳ ಸ್ನಾನಪಾನ ಶೌಚಾದಿಗಳ ವ್ಯವಸ್ಥೆಗಾಗಿ ಸಿಬ್ಬಂದಿಯನ್ನು ನೇಮಿಸುವ ಯೋಚನೆಯಿದೆ. ಇಲ್ಲಿ ಆಶ್ರಯ ಪಡೆದ ವಿದ್ಯಾರ್ಥಿಗಳ ವ್ಯಾಸಂಗ ಸಕ್ರಮ-ಸಶಿಸ್ತುಗಳ ಮೇಲ್ವಿಚಾರಣೆಗಾಗಿ ಶಿಕ್ಷಕ-ಸಿಬ್ಬಂದಿ ವರ್ಗದವರು ಆಸಕ್ತಿ ಒಲವುಗಳಿಂದ ಕ್ರಿಯಾಶೀಲರಾಗಿರುವುದು ಸಂತೋಷವನ್ನುಂಟು ಮಾಡಿದೆ. ಕಿರಿಯ ಶ್ರೀಗಳು ಹೆಚ್ಚು ಜವಾಬ್ದಾರಿ ವಹಿಸುತ್ತಿದ್ದು ಮಠದ ಏಳಿಗೆಗಾಗಿ ಮುನ್ನಡೆಯುತ್ತಿರುವುದು ನೆಮ್ಮದಿಯನ್ನು ತಂದಿದೆ.

ಸಂಸ್ಥೆಯ ಸೇವೆ ದಿನದಿಂದ ದಿನಕ್ಕೆ ವ್ಯಾಪಕವಾಗುತ್ತಿದ್ದು, ಪ್ರತಿಯೊಂದು ಕೆಲಸವನ್ನು ದೃಷ್ಟಿಸುವುದು ಸಾಧ್ಯವಾಗುತ್ತಿಲ್ಲ. ಯಾತ್ರಾರ್ಥಿಗಳ ಸಂಖ್ಯೆ ಹೆಚ್ಚುತ್ತಿದೆ. ದಾಸೋಹದ ಸೇವೆ ಶತಾಧಿಕವಾಗಿ ಬೆಳೆಯುತ್ತಿದೆ. ಪ್ರಸಾದ ಸಿದ್ಧಗೊಳಿಸುವ ಸಿಬ್ಬಂದಿಯವರ ತಾಳ್ಮೆ ಕಂಡು ಬೆರಗಾಗುತ್ತದೆ. ಆದರೆ ಇದೆಲ್ಲ "ಸಿದ್ಧಲಿಂಗೇಶ್ವರನ ಕರುಣೆ" ಎಂದು ನಂಬಿದ್ದೇನೆ. "ಕೊಡುವವಂ ಸಂಗಂ ನೀಡುವವಂ ಸಂಗ ಏನಗೊಂದುಂ ಭಾರಮಿಲ್ಲ" ಎಂದೇ ಭಾವಿಸಿದ್ದೇನೆ.

ನೀವು ವಿದ್ಯಾರ್ಥಿಗಳು ಸಂಸ್ಥೆಯ ಆಶ್ರಯ ಪಡೆದಿರುವವರು ನಿಮ್ಮ ಭವಿಷ್ಯವನ್ನು ರೂಪಿಸಿಕೊಳ್ಳುವಲ್ಲಿ ಶ್ರೀಮಠದ ಕೀರ್ತಿಗೆ ಕಾರಣರಾಗಬೇಕು, ತನ್ಮೂಲಕ ರಾಷ್ಟ್ರದ ಸಂಪತ್ತಾಗಬೇಕೆಂಬುದೇ ನಮ್ಮ ಆಶಯ.

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

ದೇಹವೇ ದೇಗುಲ, ಕಾಲೇ ಕಂಬ, ಶಿರಸ್ಸೇ ಶಿಖರ ನೋಡಾ
ಹೃದಯ ಕಮಲ ಕರ್ಣಿಕಾವಾಸವೇ ಸಿಂಹಾಸನ
ಮಹಾಘನಪರತತ್ವವೆಂಬ ಪ್ರಾಣಲಿಂಗವ ಮೂರ್ತಿಗೊಳಿಸಿ
ಪರಮಾನಂದಾಮೃತ ಜಲದಿಂದ ಮಜ್ಜನಕ್ಕೆರೆದು
ಮಹಾದಳಪದ್ಮದ ಪುಷ್ಪದಿಂದ ಪೂಜಿಸಿ
ಪರಮ ಪರಿಣಾಮವೆಂಬ ನೈವೇದ್ಯವ ಗಡಣಿಸಿ
ಪ್ರಾಣಲಿಂಗಕ್ಕೆ ಪ್ರಾಣಸಂಬಂಧವಾದ ಪೂಜೆಯ
ಮಾಡುತಿರ್ದೆನು ಕಾಣಾ
ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ!

ನಿಜವಾದ ಭಕ್ತನು ತನ್ನ ಶರೀರವನ್ನೇ ದೇವಾಲಯವನ್ನಾಗಿ ಮಾಡಿಕೊಳ್ಳುವನು. ಅವನ ಹೃದಯ ಕಮಲದ ಮಧ್ಯದಲ್ಲಿದ್ದ ಕರ್ಣಿಕೆಯೇ ದೇವನು ಕೂಡ್ರುವ ಸಿಂಹಾಸನವಾಗುವುದು. ಅಲ್ಲಿಯೇ ಪ್ರಾಣಲಿಂಗವನ್ನು ಮೂರ್ತಗೊಳಿಸಿ, ಪರಮಾನಂದ ಜಲದಿಂದ ಸ್ನಾನ ಮಾಡಿಸಿ, ಮನಃ ಪುಷ್ಪದಿಂದ ಪೂಜೆಗೈದು ಪರಮ ಸುಖರೂಪ ನೈವೇದ್ಯವನ್ನು ಅರ್ಪಿಸಿ ಪೂಜೆ ಮಾಡುವನು. ಇಲ್ಲಿ ಶಿವಗುಣವನ್ನು ಅರಳಿಸಿಕೊಳ್ಳುವುದೇ ಶಿವಪೂಜೆಯಾಗುವುದು.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ -
ಶ್ರೀ.ತೋಂ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)

## ಶ್ರದ್ಧಾಂಜಲಿ



ಡಾ. ಟಿ. ತಿಪ್ಪೇಸ್ವಾಮಿ

ಶ್ರೀ ಸಿದ್ಧಗಂಗಾ ಕಲಾ, ವಿಜ್ಞಾನ ಹಾಗೂ ವಾಣಿಜ್ಯ ಕಾಲೇಜಿನಲ್ಲಿ ಸುಮಾರು ೧೫ ವರ್ಷಗಳ ಕಾಲ ಪ್ರಾಚಾರ್ಯರಾಗಿ ಅನುಪಮ ಸೇವೆ ಸಲ್ಲಿಸುವುದರ ಮೂಲಕ ಕಾಲೇಜಿನ ಪ್ರಗತಿಗೆ ಕಾರಣರಾಗಿದ್ದ ಡಾ. ಟಿ. ತಿಪ್ಪೇಸ್ವಾಮಿ ಅವರು ಇತ್ತೀಚೆಗೆ ನಿಧನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಶಿಸ್ತು, ದಕ್ಷತೆ, ಪ್ರಾಮಾಣಿಕತೆ, ನೇರನುಡಿಗೆ ಹೆಸರಾಗಿದ್ದ ಡಾ. ಟಿ. ತಿಪ್ಪೇಸ್ವಾಮಿಯವರು ಶ್ರೀಕ್ಷೇತ್ರದ ಬಗ್ಗೆ ಅಪಾರ ಅಭಿಮಾನವನ್ನು ಹೊಂದಿದ್ದರು. ಅವರ ಅಗಲಿಕೆಯಿಂದ ಶಿಕ್ಷಣ ಕ್ಷೇತ್ರಕ್ಕೆ ತುಂಬಲಾರದ ನಷ್ಟವಾಗಿದೆ. ಕುಟುಂಬವರ್ಗದವರಿಗೆ ಅವರ ಅಗಲಿಕೆಯ ದುಃಖವನ್ನು ಹಾಗೂ ಅವರ ಆತ್ಮಕ್ಕೆ ಶಾಂತಿಯನ್ನು ದಯಾಮಯನಾದ ಪರಮಾತ್ಮನು ನೀಡಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

ಮುಖಪುಟ :
ಶ್ರೀ ಎಸ್. ನಿಜಲಿಂಗಪ್ಪನವರ ವರ್ಣ ಭಾವಚಿತ್ರ
ಡಾ. ಹೆಚ್. ಚಂದ್ರಶೇಖರ





## ಗಾಂಧಿವಾದಿ, ರಾಜಕೀಯ ಪಿತಾಮಹ, ಕರ್ಮಯೋಗಿ

# ಶ್ರೀ ಸಿದ್ಧವನಹಳ್ಳಿ ನಿಜಲಿಂಗಪ್ಪ

- ಎಚ್.ಎಸ್. ಸಿದ್ಧಗಂಗಪ್ಪ
೫೩/೧, 'ಶಿವಕೃಪ', ಮೊದಲನೇ ಮುಖ್ಯರಸ್ತೆ, ಕಾವೇರಿ ಬಡಾವಣೆ,
ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು-೪೦

ರಾಷ್ಟ್ರನಾಯಕ ಹಿರಿಯ ರಾಜಕೀಯ ಮುತ್ಸದ್ದಿ, ಅಪ್ಪಟ ಗಾಂಧಿವಾದಿ ಶ್ರೀ ಸಿದ್ಧವನಹಳ್ಳಿ ನಿಜಲಿಂಗಪ್ಪನವರು ಮಾನವೀಯ ಮೌಲ್ಯಗಳಿಗೆ ಸ್ಪಂದಿಸುತ್ತಾ, ಆದರ್ಶ ಗುಣಗಳನ್ನು ಮೈಗೂಡಿಸಿಕೊಂಡು ನಡೆ-ನುಡಿಗಳಲ್ಲಿ ಏಕತಾನತೆಯನ್ನು ಸಾಧಿಸಿ ತೋರಿಸಿದ ಈ ಶತಮಾನದ ಮಹಾಚೇತನ. ಆ ಮಹಾಚೇತನ ಆಗಸ್ಟ್ ೮ರ ರಾತ್ರಿ ಈ ಲೋಕದಿಂದ ಅಸ್ತಂಗತವಾಯಿತು. ಶ್ರೀ ಎಸ್. ನಿಜಲಿಂಗಪ್ಪನವರು ಶ್ರೀಮಠದ ಬಗ್ಗೆ, ಪರಮಪೂಜ್ಯ ಶ್ರೀಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರ ಅಭಿಮಾನ, ಭಕ್ತಿಯನ್ನಿರಿಸಿಕೊಂಡಿದ್ದರು. ಶ್ರೀಕ್ಷೇತ್ರದಲ್ಲಿ ನಡೆಯುವ ಸಾಮೂಹಿಕ ಪ್ರಾರ್ಥನೆಯನ್ನು ಕಣ್ತುಂಬ ನೋಡಿ ಆನಂದಪಡುತ್ತಿದ್ದರು. ಈ ಶತಮಾನದ ಅಪರೂಪದ ರಾಜಕಾರಣಿಗಳಲ್ಲಿ ಒಬ್ಬರಾದ ಶ್ರೀ ಎಸ್. ನಿಜಲಿಂಗಪ್ಪನವರ ನಿಧನ ದೇಶಕ್ಕೆ ಹಾಗೂ ರಾಜ್ಯಕ್ಕೆ ಭರಿಸಲಾಗದ ನಷ್ಟ. ಅವರಿಗೆ ನೂರು ತುಂಬುವುದನ್ನು ನೋಡಿ ಆನಂದಿಸಬೇಕು ಎಂಬ ಬಯಕೆಯನ್ನು ಹುಸಿಮಾಡಿ ನಮಗೆಲ್ಲ ನಿರಾಸೆಯನ್ನುಂಟು ಮಾಡಿತು. ಸಿದ್ಧಗಂಗಾ ಮಾಸಪತ್ರಿಕೆ ಈ ನುಡಿನಮನದ ಮೂಲಕ ಅವರಿಗೆ ಅಶ್ರುತರ್ಪಣ ಸಲ್ಲಿಸುತ್ತಿದೆ.

ಸರಳತೆ, ಸಜ್ಜನಿಕೆ, ಪ್ರಾಮಾಣಿಕತೆ, ಶಿಸ್ತು, ದಕ್ಷತೆ, ಸಮಯಪ್ರಜ್ಞೆ, ನಿಷ್ಠುರತೆ, ನೈತಿಕತೆ, ಸೇವಾನಿಷ್ಠೆ, ಉದಾರತೆ, ಪಾರದರ್ಶಿಕತೆ, ಸ್ವಚ್ಛತೆ, ನಿಸ್ವಾರ್ಥಿ, ಸ್ವಾಭಿಮಾನಿ, ಕರ್ಮಯೋಗಿ, ಅಪ್ರತಿಮ ರಾಷ್ಟ್ರಭಕ್ತ, ದಾರ್ಶನಿಕ, ರಾಜಕೀಯ ಮಹಾಸಂತ ಇವೆಲ್ಲದರ ಮೊತ್ತ ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪನವರು. ಈ ಶತಮಾನ ಕಂಡ ಭಾರತದ ಸರ್ವಶ್ರೇಷ್ಠ ರಾಜಕೀಯ ಮುತ್ಸದ್ಧಿ, ಉಜ್ವಲ ರಾಷ್ಟ್ರಪ್ರೇಮಿ, ಮಾನವೀಯ ಮೌಲ್ಯಗಳ ಸಾಕಾರಮೂರ್ತಿ!



ಸಂತಸದ ಕ್ಷಣ......

ಹುಟ್ಟಿದ್ದು ಬಳ್ಳಾರಿ ಜಿಲ್ಲೆ ಹಲವಾಗಿಲು. ವರ್ಷ ೧೯೦೨, ಡಿಸೆಂಬರ್ ೧೦. ಹಡೆದ ಪುಣ್ಯ ಜೀವಿಗಳು ತಂದೆ ಅಬ್ಬಲೂರು ಅಡಿವೆಪ್ಪ, ತಾಯಿ ನೀಲಮ್ಮ. ಹುಟ್ಟಿದ ೬ ವರ್ಷದಲ್ಲೇ ತಂದೆಯನ್ನು ಕಳೆದುಕೊಂಡ ನತದೃಷ್ಟ. ತಾಯಿ ಮಹಾ ಸಾಧ್ವಿ. ಎಂಥ ಕಷ್ಟದ ಪರಿಸ್ಥಿತಿಯಲ್ಲಿಯೂ ದೇವರ ಬಗ್ಗೆ ಭಕ್ತಿ, ನಂಬಿಕೆಯನ್ನು ಬಿಡದ ಮಹಾ ಶಿವಭಕ್ತೆ. ಕಡು ಬಡತನ. ಕೂಲಿ ಮಾಡಿ ಜೀವನ ನಡೆಸಬೇಕಾದ ಪರಿಸ್ಥಿತಿ. ಅವರ ಪಾಲಿಗೆ

ಯುಗಾದಿಗಿಂತ ಶಿವರಾತ್ರಿಯೇ ಹೆಚ್ಚು. ಬಂದ ಕಷ್ಟವನ್ನೆಲ್ಲ ಸಹಿಸಿಕೊಂಡು ಮಗನನ್ನು ಪ್ರೀತಿಯಿಂದ, ಅಕ್ಕರೆಯಿಂದ ಬೆಳೆಸಿದ ಸಹನಾಮೂರ್ತಿ. ಆಕೆ ಜಾನಪದ ಸಂಸ್ಕೃತಿಯ ಜೀವಂತ ಸಾಕ್ಷಿ. ಮಗನನ್ನು ತೊಡೆಯಮೇಲೆ ಕೂರಿಸಿಕೊಂಡು ಮೊದಲು ಹೇಳಿಕೊಟ್ಟಿದ್ದು ಜೀವನದ ಪಾಠ, ನೈತಿಕ ಪಾಠ.

**"ಆಚಾರಕ್ಕರಸಾಗು, ನೀತಿಗೆ ಪ್ರಭುವಾಗು**
**ಮಾತಿನಲ್ಲಿ ಚೂಡಾಮಣಿಯಾಗು - ನನಕಂದ**
**ಜ್ಯೋತಿಯೇ ಆಗು ಜಗಕೆಲ್ಲ !**

ತಾಯಿಯ ಹಾರೈಕೆ, ಆಶೀರ್ವಾದ ಹುಸಿಯಾಗಲಿಲ್ಲ! ತಾಯಿ ಹೇಳಿಕೊಟ್ಟ ಜೀವನ ಪಾಠವನ್ನು ಬಾಲಕ ನಿಜಲಿಂಗಪ್ಪ ಹುಸಿಗೊಳಿಸಲಿಲ್ಲ. ಜೀವನದಲ್ಲಿ ಪ್ರತಿ ಹೆಜ್ಜೆ ಇಡುವಾಗಲೂ ತಾಯಿ ಬೋಧಿಸಿದ ನೀತಿಪಾಠ ನೆನಪಾಗುತ್ತಿತ್ತು; ಸದಾ ಜಾಗ್ರತರನ್ನಾಗಿ ಮಾಡುತ್ತಿತ್ತು. ಹೊಟ್ಟೆಪಾಡಿಗಾಗಿ ಹಗಲೆಲ್ಲ ಹೊಲದಲ್ಲಿ ಕೂಲಿಮಾಡಿ ದಣಿವಾಗಿದ್ದರೂ, ಆಯಾಸವನ್ನು ಲೆಕ್ಕಿಸದೆ ಮಗನನ್ನು ಒಬ್ಬ ಸತ್ಪ್ರಜೆಯನ್ನಾಗಿ ಮಾಡಬೇಕೆಂದು ರಾತ್ರಿಯ ವೇಳೆ ಮಗನಿಗೆ ಮಹಾಭಾರತ, ರಾಮಾಯಣ, ಶರಣರ ನೀತಿಕಥೆಗಳನ್ನು ಹೇಳುತ್ತಿದ್ದಳು. ತಾಯಿ ಹೇಳಿದ ನೀತಿಕಥೆಗಳು, ಆಕೆ ನೀಡಿದ ಮಾರ್ಗದರ್ಶನ ನನ್ನ ಜೀವನಕ್ಕೆ ರಕ್ಷೆಯಾಯಿತು, ಭವಿಷ್ಯವನ್ನು ರೂಪಿಸಿಕೊಳ್ಳಲು ಬೆಳಕು ನೀಡಿದ ನಂದಾದೀಪವಾಯಿತು ಎಂದು ಸದಾ ನೆನಪಿಸಿಕೊಳ್ಳುತ್ತಿದ್ದರು.

ಮಗನನ್ನು ವಿದ್ಯಾವಂತನನ್ನಾಗಿ ಮಾಡಬೇಕು, ಆತ ವಿದ್ಯಾವಂತನಾಗಿ ನಾಲ್ಕಾರು ಜನರಿಗೆ ನೆರಳು ನೀಡುವ ಮಹಾವೃಕ್ಷವಾಗಬೇಕು ಎಂಬ ಉತ್ಕಟವಾದ ಬಯಕೆ. ಆ ಬಯಕೆಗೆ ಸಾಕಾರರೂಪ ಕೊಡಲು ಸೋದರಿ ಸಾವಕ್ಕ; ಪತಿ ರುದ್ರಪ್ಪನವರ ಆಶ್ರಯಕ್ಕೆ ಒಪ್ಪಿಸಿದಳು. ವೃತ್ತಿಯಲ್ಲಿ ವ್ಯಾಪಾರಿಗಳಾದ ರುದ್ರಪ್ಪನವರು ಚಿತ್ರದುರ್ಗ ಜಿಲ್ಲೆಯ ಸಿದ್ಧವನಹಳ್ಳಿಯವರು. ಕಷ್ಟಕಾಲದಲ್ಲಿ ಆಶ್ರಯನೀಡಿ ಬದುಕಿಗೆ ದಾರಿ ತೋರಿಸಿದ ಸಿದ್ಧವನಹಳ್ಳಿಯನ್ನು ಮರೆಯಲಿಲ್ಲ. ಊರಿನ ಋಣವನ್ನು ತೀರಿಸಲು ತಮ್ಮ ಹೆಸರಿನ ಮುಂದೆ ಸೇರಿಸಿಕೊಂಡರು. ಅನ್ನವಿಟ್ಟು ಸಲಹಿದ ಊರಿನ ಹೆಸರನ್ನು ಅಂತರರಾಷ್ಟ್ರೀಯ ಮಟ್ಟಕ್ಕೇರಿಸಿದ ಕೀರ್ತಿ ಶ್ರೀ ನಿಜಲಿಂಗಪ್ಪನವರದು.

ದಾವಣಗೆರೆಯಲ್ಲಿ ಪ್ರಾಥಮಿಕ ಶಿಕ್ಷಣ, ಚಿತ್ರದುರ್ಗದಲ್ಲಿ ಮಾಧ್ಯಮಿಕ ಶಿಕ್ಷಣ ಪಡೆದ ನಿಜಲಿಂಗಪ್ಪನವರು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ೧೯೨೪ರಲ್ಲಿ ಬಿ.ಎ. ಪದವಿಯನ್ನು ಪಡೆದರು. ಓದುವ ಹವ್ಯಾಸವನ್ನು ಮೈಗೂಡಿಸಿಕೊಂಡಿದ್ದ ಅವರು ಪಠ್ಯಪುಸ್ತಕಗಳ ಜೊತೆಗೆ ಅನೇಕ ಉತ್ತಮ ಗ್ರಂಥಗಳನ್ನು ಓದಿದರು. ಓದಬೇಕೆಂಬ ಬಯಕೆ ಹೆಮ್ಮರವಾಗಿ ಬೆಳೆಯುತ್ತ ಹೋಯಿತು. ಬಿ.ಎ. ಪದವಿ ಮುಗಿದ ಮೇಲೆ ಯಾವುದಾದರೂ ಉದ್ಯೋಗಕ್ಕೆ ಸೇರುವಂತೆ ಬಂಧುಗಳು, ಸ್ನೇಹಿತರು ಸಲಹೆ ಮಾಡಿದರು. ವಿದ್ಯಾವಂತರ ಸಂಖ್ಯೆ ಕಡಿಮೆಯಿದ್ದ ಆ ಕಾಲದಲ್ಲಿ ಪ್ರತಿಭಾವಂತರಿಗೆ ಸರ್ಕಾರಿ ಕೆಲಸ ಸಿಗುವುದು ಕಷ್ಟವಾಗಿರಲಿಲ್ಲ. ಸ್ವಾಭಿಮಾನಿಯಾದ ಶ್ರೀ ನಿಜಲಿಂಗಪ್ಪನವರು ಕಿವಿಗೊಡಲಿಲ್ಲ. ಕಾನೂನು ಪದವಿಯನ್ನು ಸ್ವತಂತ್ರವಾಗಿ ಬದುಕಬೇಕೆಂಬುದು ಅವರ ಅಚಲ ನಿರ್ಧಾರವಾಗಿತ್ತು. ತಮಗೆ ಸರಿ ಅನಿಸಿದ್ದನ್ನು



ಗಂಭೀರ ಮುದ್ರೆಯಲ್ಲಿ ಶ್ರೀ ನಿಜಲಿಂಗಪ್ಪ....



ರಾಷ್ಟ್ರ ಚಿಂತನೆಯಲ್ಲಿ......



ನುಡಿನಮನ



ಸಮಾರಂಭದಲ್ಲಿ ಪರಮಪೂಜ್ಯ ಶ್ರೀಶ್ರೀಗಳವರಿಗೆ ಗೌರವ ಸಮರ್ಪಣೆ

ಸಾಧಿಸಬೇಕೆಂಬ ಛಲ. ಪುಣೆಗೆ ಹೋಗಿ ಎಲ್.ಎಲ್.ಬಿ. ಪದವಿಯನ್ನು ಪಡೆದು ಚಿತ್ರದುರ್ಗದಲ್ಲಿ ವೃತ್ತಿ ಜೀವನವನ್ನು ಆರಂಭಿಸಿದರು.

ವೃತ್ತಿಯಲ್ಲಿ ವಕೀಲರಾದರೂ, ಪ್ರವೃತ್ತಿಯಲ್ಲಿ ಸಾಹಿತ್ಯ ಮತ್ತು ಕ್ರೀಡೆಗಳಲ್ಲಿ ಅಪಾರ ಆಸಕ್ತಿಯನ್ನು ಹೊಂದಿದ್ದರು. ಕೋರ್ಟ್ ಮುಗಿದ ಮೇಲೆ ಅವರು ಬ್ಯಾಟ್ ಹಿಡಿದು ಟೆನ್ನಿಸ್ ಆಡಲು ಹೋಗುತ್ತಿದ್ದರು. ಕೋರ್ಟಿನಲ್ಲಿ ತಮ್ಮ ತರ್ಕಬದ್ಧವಾದ ವಾದದಿಂದ ಎದುರಾಳಿಗೆ ಮಣ್ಣುಮುಕ್ಕುವಂತೆ ಮಾಡುತ್ತಿದ್ದ ಶ್ರೀ ನಿಜಲಿಂಗಪ್ಪನವರು ಆಟದಲ್ಲಿಯೂ ಅಷ್ಟೇ, ಸೋಲು ಹತ್ತಿರ ಸುಳಿಯುತ್ತಿರಲಿಲ್ಲ. ಗೆಲುವು ಸದಾ ಅವರ ಕೈಯಲ್ಲಿರುತ್ತಿತ್ತು. ಅವರಿಗೆ ಬಸವಣ್ಣನವರ ಬಗ್ಗೆ ಅಪಾರವಾದ ಪ್ರೀತಿ, ಗೌರವ. ಬಸವಣ್ಣನವರ ವಚನಗಳನ್ನು ಓದಿ ಮನನ ಮಾಡಿ ಜೀವನಕ್ಕಳವಡಿಸಿಕೊಂಡಿದ್ದರು. ಬಸವಣ್ಣನವರು ನುಡಿದು ನಡೆದು ತೋರಿಸಿದ ಸಪ್ತ ಸೂತ್ರಗಳಾದ **'ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ'** ಇವರ ಬದುಕಿನ ಮಾರ್ಗದರ್ಶಿಗಳಾದವು. ಬಸವಣ್ಣನವರ ಸಾಮಾಜಿಕ ಮೌಲ್ಯಗಳು, ಸಮಾನತೆ, ಸ್ತ್ರೀಯರಿಗೆ ಕೊಟ್ಟ ಸಾಮಾಜಿಕ, ಧಾರ್ಮಿಕ ಸ್ವಾತಂತ್ರ್ಯ, ಕಾಯಕನಿಷ್ಠೆ, ಇವೆಲ್ಲವೂ ಅವರ ಮೇಲೆ ಗಾಢವಾದ ಪ್ರಭಾವವನ್ನು ಬೀರಿದವು.

## ವಿವಾಹ

೧೯೨೭ರಲ್ಲಿ ದಾವಣಗೆರೆಯ ಮುರಿಗಮ್ಮ ಅವರನ್ನು ಕೈಹಿಡಿದರು. ಸುಸಂಸ್ಕೃತ ಕುಟುಂಬದಿಂದ ಬಂದ ಶ್ರೀಮತಿ ಮುರಿಗಮ್ಮ ಪತಿಗೆ ತಕ್ಕ ಸತಿ. ಸಂಸಾರದ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿಕೊಂಡು ಗಂಡನನ್ನು ದೇಶಸೇವೆಗೆ ಬಿಟ್ಟುಕೊಟ್ಟ ತ್ಯಾಗಮೂರ್ತಿ. ಶ್ರೀ ನಿಜಲಿಂಗಪ್ಪನವರದು ತುಂಬು ಕುಟುಂಬ. ಮೂರು ಗಂಡು, ಆರು ಹೆಣ್ಣು. ಕೊಡುವವನು ಶಿವನಿರುವಾಗ ಬೇಡ ಎಂದು ಹೇಳಲು ನಾನಾರು ಎಂಬ ನಿರ್ಲಿಪ್ತತೆ !

ಶ್ರೀ ನಿಜಲಿಂಗಪ್ಪನವರ ವಕೀಲಿ ವೃತ್ತಿ ತುಂಬಾ ಚೆನ್ನಾಗಿ ನಡೆಯುತ್ತಿತ್ತು. ಕೈತುಂಬ ಸಂಪಾದನೆ. ನೆಮ್ಮದಿಯ ಸಂಸಾರ. ಸಂತೃಪ್ತ ಜೀವನಕ್ಕೆ ಮತ್ತೇನು ಬೇಕು! ಸರ್ವಜ್ಞ ಹೇಳಿದ ಎಲ್ಲ ಭಾಗ್ಯವನ್ನೂ ಪಡೆದ ಆದರ್ಶ ದಂಪತಿಗಳಿಗೆ ಸ್ವರ್ಗ ತೃಣಕ್ಕೆ ಸಮಾನವಾಗಿತ್ತು. ಕೈಹಿಡಿದ ಧರ್ಮಪತ್ನಿ ಅವರ ಎಲ್ಲಾ ಕಾರ್ಯಗಳಿಗೂ ಸ್ಫೂರ್ತಿ ನೀಡುತ್ತಿದ್ದರು. **"ಆಕೆ ನೀಡಿದ ಸ್ಫೂರ್ತಿಯೇ ನಾನು ಈ ಮಟ್ಟಕ್ಕೇರಲು ಸಾಧ್ಯವಾಯಿತು"** ಎಂದು ಸದಾ ಕೃತಜ್ಞತೆಯಿಂದ ನೆನೆಯುತ್ತಿದ್ದರು.

ಭಾರತಾಂಬೆಯನ್ನು ಬ್ರಿಟೀಷರ ಕಪಿಮುಷ್ಠಿಯಿಂದ ಬಿಡಿಸಲು ದೇಶದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಬಿರುಗಾಳಿ ಬೀಸುತ್ತಿದ್ದ ಕಾಲ. ಗಾಂಧೀಜಿಯವರ ಕರೆಯ ಮೇರೆಗೆ ದೇಶದಲ್ಲೆಲ್ಲಾ ಸ್ವಾತಂತ್ರ್ಯ ಚಳುವಳಿ ನಡೆಯುತ್ತಿತ್ತು. ಗಾಂಧೀಜಿಯವರ ನಡೆ, ನುಡಿ, ದೇಶಪ್ರೇಮ ಶ್ರೀ ನಿಜಲಿಂಗಪ್ಪನವರ ಮೇಲೆ ಪ್ರಭಾವ ಬೀರಿತು. ಹುಟ್ಟಿನಿಂದಲೇ



ಶ್ರೀಕ್ಷೇತ್ರದಲ್ಲಿ ನಡೆದ ಸಮಾರಂಭದಲ್ಲಿ ಶ್ರೀ ಎಸ್. ನಿಜಲಿಂಗಪ್ಪನವರು ಮಾತನಾಡುತ್ತಿರುವುದು.



ಪರಮಪೂಜ್ಯ ಶ್ರೀಶ್ರೀಗಳವರಿಗೆ ಮಾಲಾರ್ಪಣೆ ಮಾಡುವುದನ್ನು ಕಂಡು ಹರ್ಷಚಿತ್ತರಾಗಿರುವ ರಾಷ್ಟ್ರನಾಯಕ ಶ್ರೀ ಎಸ್. ನಿಜಲಿಂಗಪ್ಪನವರು

ಬೆಳೆದುಬಂದ ದೇಶಪ್ರೇಮ ಅವರ ನರನಾಡಿಗಳಲ್ಲಿ ಹರಿಯುತ್ತಿತ್ತು. ೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ ಗಾಂಧೀಜಿಯವರನ್ನು ನೋಡುವ ಸುಯೋಗ. ಅವರು ಅಂದು ನೀಡಿದ ಕರೆಯಿಂದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಲು ಸ್ಫೂರ್ತಿ.

೧೯೩೬, ಶ್ರೀ ನಿಜಲಿಂಗಪ್ಪನವರ ಜೀವನದಲ್ಲಿ ಮಹತ್ತರವಾದ ತಿರುವು. ಒಮ್ಮೆ ಅವರ ಮನೆಗೆ ಆಗಿನ ಮೈಸೂರು ಕಾಂಗ್ರೆಸ್ ಮುಖಂಡರಾಗಿದ್ದ ಶ್ರೀ ಟಿ. ಸಿದ್ಧಲಿಂಗಯ್ಯನವರು ಬಂದು 'ಸ್ವಾತಂತ್ರ್ಯ ಚಳುವಳಿಗೆ ನಿಮ್ಮಂಥವರ ಬೆಂಬಲ ಬೇಕು. ಮೈಸೂರು ಕಾಂಗ್ರೆಸ್ ಘಟಕವನ್ನು ಇಲ್ಲಿ ಕಟ್ಟಲು ಸಹಾಯ ಬೇಕು' ಎಂದು ಕೇಳಿದರು. ಕೊನೆಗೆ ಪಟ್ಟುಬಿಡದೆ ಒಪ್ಪಿಸಿದರು. ಕೆಲವು ದಿನಗಳಲ್ಲಿ ಮೈಸೂರು ಕಾಂಗ್ರೆಸ್‌ನ ಚಿತ್ರದುರ್ಗ ಘಟಕದ ಅಧ್ಯಕ್ಷ ಸ್ಥಾನ. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುವ ವಿಚಾರವನ್ನು ತಮ್ಮ ಪತ್ನಿಯೊಡನೆ ಪ್ರಸ್ತಾಪಿಸಿದಾಗ ಆಕೆ ನೀಡಿದ ಉತ್ತರ **"ನೀವು ಮೊದಲು ಗಾಂಧೀ ಪರೀಕ್ಷೆಯಲ್ಲಿ ಪಾಸಾಗಿ ಬನ್ನಿ"**. ಆಕೆ ನೀಡಿದ ಧೈರ್ಯದ ಮಾತು ಅವರನ್ನು ಸಂಪೂರ್ಣವಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ತೊಡಗಿಸಲು ಪ್ರೇರಣೆ ನೀಡಿತು. ಸ್ವಾತಂತ್ರ್ಯ ಹೋರಾಟದ ಅಂಗವಾಗಿ ನಡೆದ ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿ ಜೈಲು ಸೇರಿದ ಶ್ರೀ ನಿಜಲಿಂಗಪ್ಪನವರು ಜೈಲಿನಲ್ಲಿ ೧೮ ತಿಂಗಳನ್ನು ಕಳೆದರು. ಈ ಅವಧಿ ಅವರಿಗೆ ದೇಶಸೇವೆಗೆ ಅರ್ಪಿಸಿಕೊಳ್ಳಲು ನೈತಿಕ ಸ್ಥೈರ್ಯವನ್ನು ತಂದುಕೊಟ್ಟಿತು. ಅವರು ಜೈಲಿನಿಂದ ಹಿಂದಿರುಗಿದ ಮೇಲೆ ಅವರ ಸಂಸಾರದಲ್ಲಿ ಬಡತನದ ದಟ್ಟವಾದ ನೆರಳು ಕವಿಯಿತು. ವಕೀಲಿ ವೃತ್ತಿಯಿಂದ ಡಿಬಾರ್ ಮಾಡಲಾಯಿತು. ಸಂಪಾದನೆ ಕೈಬಿಟ್ಟಿತು. ಹುಣ್ಣಿಮೆಯ ತಂಗಾಳಿಯಲ್ಲಿ ಸುಖವನ್ನು ಅನುಭವಿಸುತ್ತಿದ್ದ ಸಂಸಾರಕ್ಕೆ ಅಮಾವಾಸ್ಯೆಯ ಕಾರ್ಗತ್ತಲ ಅನುಭವ. ಶ್ರೀಮತಿ ಮುರಿಗೆಮ್ಮನವರು ಧೈರ್ಯದಿಂದ ಬಡತನದ ಕಹಿಯನ್ನು ಸಂತೋಷದಿಂದ ಎದುರಿಸಿದರು. ಸುಮಾರು ೮-೧೦ ವರ್ಷಗಳ ಕಾಲ ಪಟ್ಟ ಕಷ್ಟ, ಅನುಭವಿಸಿದ ಬವಣೆ ಆ ತಾಯಿಗೆ ಗೊತ್ತು - ಮಕ್ಕಳಿಗೆ ಗೊತ್ತು.

ಶ್ರೀ ನಿಜಲಿಂಗಪ್ಪನವರು ಸಂಸಾರರನ್ನು ಮರೆತು ದೇಶದ ಚಿಂತನೆಗೆ ತೊಡಗಿದರು. ಕುಟುಂಬದವರನ್ನು ರಾಜಕೀಯ ಕ್ಷೇತ್ರದಿಂದ ದೂರವಿಟ್ಟರು. ಅವರು ಮನಸ್ಸು ಮಾಡಿದ್ದರೆ ರಾಜಕೀಯ ಕ್ಷೇತ್ರದಲ್ಲಿ ತೊಡಗಿಸಿಕೊಳ್ಳುವಂತೆ ಮಾಡುವುದು ಕಷ್ಟವಾಗಿರಲಿಲ್ಲ. ಆದರೆ ಅವರು ಹಾಗೆ ಮಾಡಲಿಲ್ಲ. ಗಾಂಧೀಜಿಯವರ ಸರಳತೆ, ನಿಷ್ಠೆ, ಪ್ರಾಮಾಣಿಕತೆಯನ್ನು ಮೈಗೂಡಿಸಿಕೊಂಡ ಶ್ರೀ ನಿಜಲಿಂಗಪ್ಪನವರ ಚಿಂತನೆ ಸಾಮಾಜಿಕ ಪ್ರಜ್ಞೆಯ ದ್ಯೋತಕ. ಸಾಂಸ್ಕೃತಿಕ ಹಾಗೂ ರಾಜಕೀಯ ಕರ್ನಾಟಕ ಏಕೀಕರಣ, ಸರ್ವಾಂಗೀಣ ಗ್ರಾಮೀಣಾಭಿವೃದ್ಧಿಯ ಕನಸು, ಗ್ರಾಮೀಣ ಜನರ ಆರ್ಥಿಕ ಸ್ವಾವಲಂಬನೆ, ಸ್ತ್ರೀ-ಪುರುಷರ ಸಮಾನತೆ, ವಿಧವಾ ವಿವಾಹ ಪ್ರತಿಪಾದನೆ - ಹೀಗೆ ಅವರ ಚಿಂತನೆಗಳಿಗೆ ಹಲವು ಹತ್ತು ಮುಖ.

**ಸೆರೆಮನೆ ವಾಸ**

೧೯೪೨ರಲ್ಲಿ 'ಕ್ವಿಟ್ ಇಂಡಿಯಾ ಚಳುವಳಿ'ಯಲ್ಲಿ ಭಾಗವಹಿಸಿದ್ದಕ್ಕಾಗಿ ಸೆರೆಮನೆ ವಾಸ. ಸೆರೆಮನೆ ವಾಸ ಅವರ ಆಳವಾದ ಚಿಂತನೆಗೆ ಕರ್ನಾಟಕದ ಏಕೀಕರಣದ ಕನಸನ್ನು ಸಾಕಾರಗೊಳಿಸಲು ವೇದಿಕೆಯೊದಗಿಸಿತು. ಹಂಚಿಹೋಗಿದ್ದ ಕರ್ನಾಟಕವನ್ನು ಒಂದುಗೂಡಿಸುವ ಉತ್ಕಟವಾದ ಬಯಕೆ. ಅವರು ಮಂಡಿಸಿದ 'ಏಕೀಕರಣ' ವಾದವನ್ನು ಕಂಡು ಉಕ್ಕಿನ ಮನುಷ್ಯ ಸರ್ದಾರ್ ಪಟೇಲ್ ಅವರು ಬೆಕ್ಕಸಬೆರಗಾದರು. ಅವರ ವಾದದ ಹಿಂದೆ ವಿಚಾರವಿತ್ತು - ಉಜ್ವಲವಾದ ಭಾಷಾಭಿಮಾನವಿತ್ತು.

'ಎಸ್ಸೆನ್' ಅವರದು ಉಜ್ವಲವಾದ ಪ್ರತಿಭೆ. ಕಾನೂನಿನ ಬಗ್ಗೆ ಅಗಾಧವಾದ ಪಾಂಡಿತ್ಯ. ೧೯೪೬ರಲ್ಲಿ ಸಂವಿಧಾನ ರಚನಾ ಸಭೆಗೆ ಆಯ್ಕೆಯಾಗುವುದರ ಮೂಲಕ ಕರ್ನಾಟಕಕ್ಕೆ ಒಂದು ವಿಶಿಷ್ಟಸ್ಥಾನ, ಗೌರವವನ್ನು ತಂದುಕೊಟ್ಟರು. ೧೯೫೨-೫೬ರವರೆಗೆ ಲೋಕಸಭಾ ಸದಸ್ಯರಾಗಿ ಅವರು ಮಂಡಿಸಿದ ವಾದ, ವಿಚಾರ ವಿಮರ್ಶೆಯಿಂದ ಅವರೊಬ್ಬ ಉತ್ತಮ ಸಂಸದೀಯ ವಾಕ್‌ಪಟು ಎಂಬ ಕೀರ್ತಿ. ರಾಜಕೀಯದಲ್ಲಿ ಅವರು ಪುಟಕ್ಕಿಟ್ಟ ಚಿನ್ನದಂತೆ ಪ್ರಾಜ್ವಲ್ಯಮಾನವಾಗಿ







ಬೆಂಗಳೂರಿನಲ್ಲಿ ನಡೆದ ಸಮಾರಂಭದಲ್ಲಿ 'ಈ ಶತಮಾನದ ಹಿರಿಯರು' :-

ಎಡದಿಂದ ಬಲಕ್ಕೆ : ನ್ಯಾಯಮೂರ್ತಿ ಶ್ರೀ ನಿಟ್ಟೂರು ಶ್ರೀನಿವಾಸರಾಯರು, ಡಾ. ಕೆ. ಶಿವರಾಮ ಕಾರಂತ, ಪ್ರೊ. ಎ.ಎನ್. ಮೂರ್ತಿರಾಯರು, ಪರಮಪೂಜ್ಯ ಶ್ರೀಶ್ರೀಗಳವರು, ಶ್ರೀ ಎಸ್. ನಿಜಲಿಂಗಪ್ಪನವರು, ಶ್ರೀ ಬದರಿ ನಾರಾಯಣ್ ಹಾಗೂ ಶ್ರೀಮತಿ ವೆಂಕಟಲಕ್ಷ್ಮಿಯವರು.

ಪ್ರಕಾಶಿಸಿದರು. ಕಾಂಗ್ರೆಸ್ ಕಾರ್ಯಕಾರಿ ಸಮಿತಿಗೆ ನಾಮಕರಣದಿಂದ ವಲ್ಲಭಭಾಯಿ ಪಟೇಲ್, ನೆಹರೂ, ಗೋವಿಂದವಲ್ಲಭ ಪಂತ್ ಮೊದಲಾದ ರಾಷ್ಟ್ರನಾಯಕರೊಂದಿಗೆ ಆತ್ಮೀಯ ಸಂಪರ್ಕ; ಮುಕ್ತಮನಸ್ಸಿನಿಂದ ವಿಚಾರ ವಿನಿಮಯ. ರಾಷ್ಟ್ರದ ಸರ್ವಾಂಗೀಣ ಅಭಿವೃದ್ಧಿಗೆ ಅವರು ನೀಡಿದ ಸಲಹೆ, ಚಿಂತನೆ ಅತ್ಯಮೂಲ್ಯ; ಅವು ಸಾರ್ವಕಾಲಿಕ. ರಾಷ್ಟ್ರಮಟ್ಟದ ರಾಜಕಾರಣದಲ್ಲಿದ್ದರೂ ರಾಜ್ಯದ ಒಳಿತಿಗಾಗಿ ಸದಾ ಹೋರಾಟ. ಕರ್ನಾಟಕ ಏಕೀಕರಣಕ್ಕೆ ರಾಷ್ಟ್ರಮಟ್ಟದಲ್ಲಿ ಅವಿರತ ಪ್ರಯತ್ನ. ಪಟ್ಟುಬಿಡದ ಹಠವಾದಿ. ಅವರದು ನಿರಾಡಂಬರ ವ್ಯಕ್ತಿತ್ವ. ನಿಷ್ಕಳಂಕ ಪರಿಶುದ್ಧ ಹೃದಯ. ಅವರಾಡುತ್ತಿದ್ದ ಒಂದೊಂದು ಮಾತು ಬೆಲೆಯುಳ್ಳದ್ದು.

**ಮುಖ್ಯಮಂತ್ರಿ**

ಶ್ರೀ ಸಿದ್ಧವನಹಳ್ಳಿ ನಿಜಲಿಂಗಪ್ಪನವರು ಒಬ್ಬ ಮಹಾನ್ ಸಾಧಕ. ಆಶಾವಾದಿ. ಮುಂದಿಟ್ಟ ಹೆಜ್ಜೆಯನ್ನು ಹಿಂದಕ್ಕೆ ಸರಿಸಿದವರಲ್ಲ. ಹರಿದು ಹಂಚಿ ಹೋಗಿದ್ದ ಕರ್ನಾಟಕವನ್ನು ಒಂದು ಮಾಡಿದ ಮೇರುಸದೃಶ ವ್ಯಕ್ತಿ. ಅಭಿನಂದನೆಯ ಮಹಾಪೂರ. ಕನಸು ನನಸಾಗಿದ್ದಕ್ಕೆ ಅಪರಿಮಿತ ಸಂತಸ. ರಾಜ್ಯದ ಸರ್ವಾಂಗೀಣ ಅಭಿವೃದ್ಧಿಯ ಕನಸನ್ನು ಹೊತ್ತ ಶ್ರೀ ನಿಜಲಿಂಗಪ್ಪನವರು ಕರ್ನಾಟಕ ಏಕೀಕರಣ ಮೊದಲ ಮುಖ್ಯಮಂತ್ರಿ ಎಂಬ ಹೆಗ್ಗಳಿಕೆಗೆ ಪಾತ್ರರಾದರು. ಎರಡು ಬಾರಿ ಕರ್ನಾಟಕದ ಮುಖ್ಯಮಂತ್ರಿಯಾಗಿ ಆ ಸ್ಥಾನಕ್ಕೆ ಘನತೆ, ಗೌರವವನ್ನು ತಂದುಕೊಟ್ಟರು. ಪಾರದರ್ಶಕ ಆಡಳಿತದಿಂದ ರಾಷ್ಟ್ರದ ಗಮನವನ್ನು ಸೆಳೆದರು. ದಿನದ ೨೪ ಗಂಟೆಗಳಲ್ಲಿ ಸ್ವಂತಕ್ಕೆ ಬಳಸಿಕೊಳ್ಳುತ್ತಿದ್ದುದು ತುಂಬಾ ಕಡಿಮೆ ಅವಧಿ. ಬಹುತೇಕ ವೇಳೆಯನ್ನು ಕರ್ನಾಟಕದ ಅಭಿವೃದ್ಧಿಗಾಗಿ ವಿನಿಯೋಗಿಸಿದ ಮಹಾನ್ ಚಿಂತಕ!

ಅವರ ಆಡಳಿತಾವಧಿಯಲ್ಲಿ ಕೃಷಿ, ನೀರಾವರಿ, ವಿದ್ಯುತ್, ಅರಣ್ಯಾಭಿವೃದ್ಧಿ, ಶಿಕ್ಷಣ, ಮೊದಲಾದ ಕ್ಷೇತ್ರಗಳಲ್ಲಿ ಕರ್ನಾಟಕ ಸಾಧಿಸಿದ ಪ್ರಗತಿ ಗಮನಾರ್ಹವಾದುದು. ಅವರು ಶರಾವತಿ ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಿ ರಾಜ್ಯ ವಿದ್ಯುತ್ ಕ್ಷೇತ್ರದಲ್ಲಿ ಸ್ವಾವಲಂಬಿಯಾಗುವಂತೆ ಮಾಡಿದುದು



ಪರಮಪೂಜ್ಯ ಶ್ರೀಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಬೆಂಗಳೂರಿನಲ್ಲಿ 'ಬಸವ ವೇದಿಕೆ' ನೀಡಿದ 'ಬಸವಶ್ರೀ' ಪ್ರಶಸ್ತಿಯನ್ನು ಶ್ರೀ ಎಸ್. ನಿಜಲಿಂಗಪ್ಪನವರಿಗೆ ನೀಡುತ್ತಿರುವುದು. ಚಿತ್ರದಲ್ಲಿ ಮುಖ್ಯಮಂತ್ರಿ ಶ್ರೀ ಜೆ.ಹೆಚ್.ಪಟೇಲ್. ಪದ್ಮಶ್ರೀ ಆರ್.ಎಂ.ಬಿ. ಆರಾಧ್ಯ, ಕೆ.ಎ.ಎಸ್. ಹಿರಿಯ ಅಧಿಕಾರಿ ಶ್ರೀ ಸಿ. ಸೋಮಶೇಖರ್ ಅವರನ್ನು ಕಾಣಬಹುದು.

ನಿಜಕ್ಕೂ ದೊಡ್ಡಸಾಧನೆ. ಕರ್ನಾಟಕಕ್ಕೆ ಕೊಟ್ಟ ಸದಾ ನೆನಪಿನಲ್ಲಿ ಉಳಿಯುವಂಥ ಬಹುದೊಡ್ಡ ಉಡುಗೊರೆ. ಕರ್ನಾಟಕ ಮುಖ್ಯಮಂತ್ರಿಯಾಗಿ ನಾಡಿನ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಅಭಿವೃದ್ಧಿ ಕ್ಷೇತ್ರಗಳ ಇತಿಹಾಸದಲ್ಲಿ ಅವರು ಸಲ್ಲಿಸಿದ ಸೇವೆ, ಮಾಡಿದ ಸಾಧನೆ ಸುವರ್ಣಾಕ್ಷರಗಳಲ್ಲಿ ಬರೆದಿಡುವಂತಹುದು

ನಾಡಿನ ಜನತೆಯ ಸಮಸ್ಯೆಗಳಿಗೆ ಸದಾ ಸ್ಪಂದಿಸುತ್ತಿದ್ದ ಸಹೃದಯಿ, ಜನಾನುರಾಗಿ. ಎಂಥ ಕಷ್ಟ ಪರಿಸ್ಥಿತಿಯಲ್ಲಿಯೂ ಮಾನಸಿಕ ಸಮತೋಲನವನ್ನು ಕಳೆದುಕೊಳ್ಳದ ಸ್ಥಿತಪ್ರಜ್ಞ. ಸದಾ ನಗುಮುಖಿ; ಹಸನ್ಮುಖಿ. ಅವರೊಬ್ಬ ಅಜಾತಶತ್ರು. ಎಂಥ ಕಠಿಣ ಹೃದಯದವರನ್ನೂ ಮೃದುವಾಗಿಸುವ ವಿನಯ ಸಂಪನ್ನ. ಶತೃಗಳಿಗೂ ಪ್ರೀತಿ, ವಿಶ್ವಾಸವನ್ನು ತೋರಿಸುತ್ತಿದ್ದ ಕರುಣಾಮಯಿ. ಅವರೆಂದೂ ಕೇಡು ಬಗೆದವರನ್ನು ದ್ವೇಷಿಸದೆ ಪ್ರೀತಿಸಿದರು. ತೊಂದರೆ ಕೊಟ್ಟವರನ್ನು ಗೌರವರಿಂದ ನೋಡಿಕೊಂಡರು.

ಅವರದು ಹಾಲಿನಂತ ಮನಸ್ಸು, ಬೆಣ್ಣೆಯಷ್ಟು ಮೃದು. ಆದರೆ ಅನ್ಯಾಯವಾದಾಗ ಅದನ್ನು ನಿರ್ದಾಕ್ಷಿಣ್ಯವಾಗಿ ಪ್ರತಿಭಟಿಸುತ್ತಿದ್ದರು. ಆಗ ಅವರ ಮನಸ್ಸು ವಜ್ರದಷ್ಟು ಕಠಿಣವಾಗುತ್ತಿತ್ತು. ತಾವು ನಂಬಿಕೊಂಡು ಬಂದಿದ್ದ ಆದರ್ಶದ ವಿರುದ್ಧ ಎಂದೂ ನಡೆದುಕೊಂಡವರಲ್ಲ. ರಾಜಿ ಮಾಡಿಕೊಂಡವರಲ್ಲ.

**ಆದರ್ಶ ವ್ಯಕ್ತಿತ್ವ**

ಶ್ರೀ ನಿಜಲಿಂಗಪ್ಪನವರು ಮುಖ್ಯಮಂತ್ರಿಯಾಗಿದ್ದಾಗ ಅವರ ಮಕ್ಕಳು ಸೈಕಲ್‌ನಲ್ಲೇ ಶಾಲೆಗೆ ಹೋಗುತ್ತಿದ್ದರು. ಎಂದೂ ತಮ್ಮ ಅಧಿಕೃತ ಕಾರನ್ನು ಮಕ್ಕಳು ಉಪಯೋಗಿಸಿಕೊಳ್ಳಲು ಅವಕಾಶ ಕೊಡಲಿಲ್ಲ. ಅವರ ಹಿರಿಯ ಮಗ ಮುಂಬಯಿಯ ಬಾಬಾ ಅಣುಕೇಂದ್ರದಲ್ಲಿ ಹಿರಿಯ ಹುದ್ದೆಯಲ್ಲಿದ್ದರು. ಅವರು ಒಮ್ಮೆ ಬೆಂಗಳೂರಿಗೆ ಬಂದಾಗ ಆಟೋದಲ್ಲಿ ಪ್ರಯಾಣ ಮಾಡಲು ಹೊರಟಾಗ ಶ್ರೀ ಪಾಟೀಲ ಪುಟ್ಟಪ್ಪನವರು ಮುಖ್ಯಮಂತ್ರಿಯವರ








ಪರಮಪೂಜ್ಯ ಶ್ರೀಶ್ರೀಗಳವರ ವಜ್ರಮಹೋತ್ಸವ ಸಮಾರಂಭದಲ್ಲಿ ಶ್ರೀ ಎಸ್. ನಿಜಲಿಂಗಪ್ಪನವರು

ಕಾರಿನಲ್ಲಿ ಹೋಗಬಾರದೆ ಎಂದು ಕೇಳಿದಾಗ ಅವರು ಕೊಟ್ಟ ಉತ್ತರ "ಕಾರು ನನ್ನ ಅಪ್ಪಾಜಿಯವರದಲ್ಲ. ಅವರಲ್ಲಿ



ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡ ಸಂದರ್ಭದಲ್ಲಿ ಶ್ರೀ ಎಸ್.ಎಂ. ಕೃಷ್ಣ ಅವರು ಹಿರಿಯ ರಾಷ್ಟ್ರನಾಯಕ ಶ್ರೀ ಎಸ್. ನಿಜಲಿಂಗಪ್ಪನವರನ್ನು ಭೇಟಿಯಾಗಿ ಮಾರ್ಗದರ್ಶನ ಪಡೆಯುತ್ತಿರುವುದು.

ಪ್ರಯಾಣಿಸುವ ಹಕ್ಕು ನನಗಿಲ್ಲ" ಎಂದು ತಿಳಿಸಿದ ಆದರ್ಶವಾದಿ. ತಂದೆಯ ಆದರ್ಶ ಗುಣಗಳನ್ನು, ಮಾನವೀಯ ಮೌಲ್ಯಗಳನ್ನು ಮಕ್ಕಳೂ ಮೈಗೂಡಿಸಿಕೊಂಡಿದ್ದರು.

ಮುಖ್ಯಮಂತ್ರಿಯಾಗಿದ್ದ ಸಂದರ್ಭದಲ್ಲಿ ಅವರ ಧರ್ಮಪತ್ನಿ ಶ್ರೀಮತಿ ಮುರಿಗಮ್ಮನವರು ಒಮ್ಮೆ ಚಿತ್ರದುರ್ಗಕ್ಕೆ ಹೋಗಲು ಕಾರಿನಲ್ಲಿ ಹೊರಟಾಗ ನಿಜಲಿಂಗಪ್ಪನವರು "ಇದು ನನ್ನ ಕಾರಲ್ಲ, ಸರ್ಕಾರದ್ದು" ಎಂದು ಹೇಳಿ ತಮ್ಮ ಆಪ್ತ ಸಹಾಯಕರನ್ನು ಕರೆದು ತಮ್ಮ ಶ್ರೀಮತಿಯವರಿಗೆ ರೈಲಿನಲ್ಲಿ ಹೋಗಲು ವ್ಯವಸ್ಥೆ ಮಾಡುವಂತೆ ತಿಲಿಸಿದರು. ಸರ್ಕಾರದ ಆಸ್ತಿಯನ್ನು ತಮ್ಮ ಸ್ವಂತಕ್ಕೆ ಉಪಯೋಗಿಸಿಕೊಳ್ಳಬಾರದೆಂದು ಸಾಮಾಜಿಕ ಪ್ರಜ್ಞೆ ಅವರಲ್ಲಿ ಮನೆಮಾಡಿಕೊಂಡಿತ್ತು.

ಕರ್ನಾಟಕದಲ್ಲಿ ಮುಖ್ಯಮಂತ್ರಿಯಾಗಿದ್ದವರಲ್ಲಿ ಬೆಂಗಳೂರಿನಲ್ಲಿ ಸ್ವಂತ ಮನೆಯಿಲ್ಲದವರೆಂದರೆ ಎಸ್. ನಿಜಲಿಂಗಪ್ಪನವರು. ಅವರಿಗೆ ಬೆಂಗಳೂರಿನಲ್ಲಿ ಮನೆಯಿಲ್ಲದ್ದನ್ನು ಮನಗಂಡ ಆಗಿನ ಮುಖ್ಯಮಂತ್ರಿ ಶ್ರೀ ಎಸ್.ಆರ್.



## ಸಂತಾಪ ಸಂದೇಶ

ಕರ್ನಾಟಕದ ಏಕೀಕರಣ ಶಿವಶಿಲ್ಪಿ, ರಾಷ್ಟ್ರಭಕ್ತರು, ಹಿರಿಯ ಮುತ್ಸದ್ಧಿಗಳೂ, ಮಹಾತ್ಮಾಜಿಯವರ ಸಮಕಾಲೀನ ಸ್ವಾತಂತ್ರ್ಯ ಹೋರಾಟಗಾರರೂ, ಭರತ ಖಂಡದ ಹಿರಿಯ ರಾಜಕಾರಣಿಗಳಲ್ಲೊಬ್ಬರು, ನಾಡಿನ ಮಾಜಿ ಮುಖ್ಯಮಂತ್ರಿಗಳೂ, ಅಪೂರ್ವ ದೇಶಚಿಂತಕರೂ, ಪ್ರಾಮಾಣಿಕತೆಗೆ ಹೆಸರಾಗಿ ಸಮನ್ವಯ ದೃಷ್ಟಿಯ ಸಮಗ್ರ ಚಿಂತಕರೆನಿಸಿದ, ಪರಿಶುದ್ಧ ಗಾಂಧೀವಾದಿಗಳಾದ ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪನವರು ಮಂಗಳವಾರ ರಾತ್ರಿ ೧೦.೩೦ರಲ್ಲಿ ದೈವಾಧೀನರಾದ ವಿಷಯ ತಿಳಿದು ದುಃಖವಾಗಿರುತ್ತದೆ. ೯೮ ವರ್ಷಗಳ ತುಂಬು ಜೀವನದುದ್ದಕ್ಕೂ ರಾಜ್ಯ ಮತ್ತು ರಾಷ್ಟ್ರದ ಅಭಿವೃದ್ಧಿಗಾಗಿ ಶ್ರಮಿಸಿದ ಅನೇಕ ಜನಪರ ಯೋಜನೆಗಳ ರೂವಾರಿಯಾಗಿದ್ದವರು. ಶ್ರೀಯುತರು ಆದರ್ಶ ಜನನಾಯಕರೆಂದು, ನೇರನುಡಿಯ ರಾಜಕಾರಣಿಗಳೆಂದು, ರಾಷ್ಟ್ರನಾಯಕರೊಡನೆ ತಮ್ಮ ಆಲೋಚನೆಗಳನ್ನು ಮುಂದಿಡುವಲ್ಲಿ ಅಸಾಮಾನ್ಯ ಧೈರ್ಯಶೀಲರೆಂದು ಹೆಸರಾಗಿದ್ದರು. ಬಡತನ, ಅನಕ್ಷರತೆ, ಜಾತೀಯತೆ, ಪ್ರಾಂತೀಯತೆ ಮುಂತಾದವುಗಳ ವಿಚಾರದಲ್ಲಿ ನಿಷ್ಪಕ್ಷಪಾತ ಮನೋಭಾವದವರಾಗಿ ಸದಾ ನ್ಯಾಯಪರರೆಂದು ಅಬಾಲವೃದ್ಧರಾದಿಯಾಗಿ ರಾಷ್ಟ್ರಹಾಗೂ ವಿದೇಶದ ಅನೇಕ ವಿಚಾರವಂತರಿಂದ ಗೌರವ ಗಳಿಸಿದ್ದರು. ಶ್ರೀಮಠದ ಕಿಂಚಿತ್ ಸೇವೆಯನ್ನು ಮುಕ್ತಕಂಠದಿಂದ, ತುಂಬು ಹೃದಯದಿಂದ ಪ್ರಶಂಶಿಸಿ ಪ್ರೋತ್ಸಾಹವನ್ನು ನೀಡಿದ ಸಂದರ್ಭಗಳನ್ನು ಈ ಸಮಯದಲ್ಲಿ ಸ್ಮರಿಸುತ್ತೇವೆ. ಕರ್ನಾಟಕ ಮತ್ತೊಬ್ಬ ನಿಜಲಿಂಗಪ್ಪನವರನ್ನು ಕಾಣಲಾರದೆಂದೇ ನಮ್ಮ ಭಾವನೆಯಾಗಿದೆ. ಸಾತ್ವಿಕ ಜೀವನವೇ, ಸೇವಾಮೌಲ್ಯವೇ ರೂಪುವೆತ್ತಂತಿದ್ದ ಶ್ರೀಯುತರು ನಾಡನ್ನಗಲಿ ಅಪಾರ ನಷ್ಟವುಂಟಾಗಿದೆ. ಸಾಮಾಜಿಕ, ಶೈಕ್ಷಣಿಕ, ಕೃಷಿ, ಆರೋಗ್ಯ, ರಾಜಕೀಯ ಮುಂತಾದ ಕ್ಷೇತ್ರಗಳು ಶ್ರೀಯುತರ ಅಗಲಿಕೆಯಿಂದ ಕೊರತೆಯನ್ನು ಅನುಭವಿಸುವಂತಾಗಿದೆ.

ಕರ್ನಾಟಕವೆಂದರೆ ನಿಜಲಿಂಗಪ್ಪ - ನಿಜಲಿಂಗಪ್ಪನವರೆಂದರೆ ಕರ್ನಾಟಕವೆನ್ನುವಷ್ಟು ರಾಜ್ಯವನ್ನು ಪ್ರೀತಿಸಿದ ಅಪರೂಪದ ಅಮೂಲ್ಯಚೇತನವಾಗಿದ್ದರು ದಿವಂಗತರು. ರಾಜ್ಯ ಹಾಗೂ ರಾಷ್ಟ್ರಮಟ್ಟದ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದವರು. ರಾಷ್ಟ್ರಪತಿ ಸ್ಥಾನಕ್ಕೆ ಆಹ್ವಾನಿಸಿದರೂ ಮಿತ್ರ ನಿಷ್ಠೆಯಿಂದಾಗಿ ಅದನ್ನು ನಯವಾಗಿ ನಿರಾಕರಿಸಿ ತಮ್ಮ ಹಿರಿತನವನ್ನು ವ್ಯಕ್ತಪಡಿಸಿದರು. ಅವರೆಂದೂ ಭ್ರಷ್ಟಾಚಾರದ ಮುಖದರ್ಶನ ಮಾಡಿದವರಲ್ಲ. ವಿಷಯ ವಾಸನೆಗಳಿಂದ ದೂರವಿದ್ದ ಶ್ರೇಷ್ಠ ರಾಜಕಾರಣಿಗಳೆನ್ನುವಲ್ಲಿ ನಮಗೆ ಅಭಿಮಾನವಿದೆ.

ಶ್ರೀಯುತರ ಅಗಲಿಕೆಯಿಂದ ಕುಟುಂಬವರ್ಗದವರಿಗೆ ಅಭಿಮಾನಿಗಳಿಗೆ ಉಂಟಾಗಿರುವ ದುಃಖವನ್ನು ಸಹಿಸುವಂತೆ ದಯಾಮಯನಾದ ಪರಶಿವನು ಶಕ್ತಿಯನ್ನೀಯಲಿ ಎಂದು ಹಾರೈಸುತ್ತಾ ಅಗಲಿದ ಮಹಾಚೇತನಕ್ಕೆ ನಾಡು ಶ್ರದ್ಧಾಂಜಲಿಯನ್ನು ಸಲ್ಲಿಸುತ್ತಿರುವ ಈ ಸಂದರ್ಭದಲ್ಲಿ ಭಗವಂತನು ದಿವಂಗತರ ಆತ್ಮಕ್ಕೆ ಶಾಂತಿಯನ್ನು ಅನುಗ್ರಹಿಸಲೆಂದು ಹಾರೈಸುತ್ತೇವೆ.

(ಶ್ರೀ ಶಿವಕುಮಾರ ಸ್ವಾಮಿಗಳು)
ಶ್ರೀ ಸಿದ್ಧಗಂಗಾ ಮಠ

ದಿನಾಂಕ : ೦೯.೦೮.೨೦೦೦





## ಶ್ರೀ ಎಸ್. ನಿಜಲಿಂಗಪ್ಪನವರಿಗೆ ಗಣ್ಯರಿಂದ ನುಡಿನಮನ



ಶ್ರೀ ನಿಜಲಿಂಗಪ್ಪನವರನ್ನು ತಾವು ಭೇಟಿಯಾದ ಹಲವು ಸಂದರ್ಭಗಳನ್ನು ತಮ್ಮ ಶೋಕಸಂದೇಶದಲ್ಲಿ ನೆನಪಿಸಿಕೊಂಡಿರುವ ರಾಷ್ಟ್ರಪತಿ ಶ್ರೀ ಕೆ.ಆರ್. ನಾರಾಯಣ್ ಅವರು ಸಾಮಾಜಿಕ ಜವಾಬ್ದಾರಿಯ ವಿಷಯಗಳಲ್ಲಿ ಅವರು ತೋರುತ್ತಿದ್ದ ಅತೀವ ಆಸಕ್ತಿಯೇ ಅವರನ್ನು ಕೊನೆಯವರೆಗೆ ಜೀವಂತವಾಗಿರಿಸಿತು. ಸ್ವಾತಂತ್ರ್ಯ ನಂತರದ ದಿನಗಳಲ್ಲಿ ಅವರು ಮಹತ್ತರ ಪಾತ್ರ ವಹಿಸಿದ್ದರು.

- ಕೆ.ಆರ್. ನಾರಾಯಣ್
ರಾಷ್ಟ್ರಪತಿಗಳು, ಭಾರತ ಸರ್ಕಾರ



ನಿಜಲಿಂಗಪ್ಪನವರು ಆಧುನಿಕ ಕರ್ನಾಟಕದ ಹರಿಕಾರ ಮಾತ್ರವಲ್ಲದೆ ದೇಶದ ಅತ್ಯುನ್ನತ ನಾಯಕರಲ್ಲಿಯೂ ಒಬ್ಬರಾಗಿದ್ದರು.

- ಕೃಷ್ಣಕಾಂತ್
ಉಪರಾಷ್ಟ್ರಪತಿಗಳು ಭಾರತ ಸರ್ಕಾರ



ಸ್ವಾತಂತ್ರ್ಯ ಹೋರಾಟದಲ್ಲಿ ಅವರ ಸಕ್ರಿಯ ಹೋರಾಟ ಮತ್ತು ಕರ್ನಾಟಕದ ಮುಖ್ಯಮಂತ್ರಿಯಾಗಿ ಅವರ ಕಾರ್ಯವೈಖರಿ ಎಂದೆಂದೂ ನೆನಪಿನಲ್ಲಿ ಉಳಿಯುವಂತಹುದು.

- ಅಟಲ್ ಬಿಹಾರಿ ವಾಜಪೇಯಿ
ಪ್ರಧಾನಮಂತ್ರಿಗಳು, ಭಾರತ ಸರ್ಕಾರ



ಬಡತನ ಮತ್ತು ಗ್ರಾಮೀಣ ಜನತೆಯ ಬಗ್ಗೆ ಅಪಾರ ಕಾಳಜಿಯುಳ್ಳ ಶ್ರೀ ನಿಜಲಿಂಗಪ್ಪನವರು ಇನ್ನೊಂದಿಷ್ಟು ವರ್ಷ ಬಾಳಿ ಬದುಕಬೇಕಾಗಿತ್ತು. ರಾಷ್ಟ್ರ ರಾಜಕಾರಣದಲ್ಲಿಯೂ ಶ್ರೀ ಎಸ್. ನಿಜಲಿಂಗಪ್ಪನವರು ಯಾವತ್ತೂ ಮರೆಯಲಾಗದಂಥ ವ್ಯಕ್ತಿಗಳಾಗಿದ್ದರು.

- ಮುರಳಿ ಮನೋಹರ ಜೋಷಿ
ಕೇಂದ್ರ ಸಚಿವರು



ನಿಜಲಿಂಗಪ್ಪ ಅವರು ಕರ್ನಾಟಕಕ್ಕಷ್ಟೇ ಅಲ್ಲ ಇಡೀ ಭಾರತ ದೇಶದ ಅನೇಕ ರಾಜಕಾರಣಿಗಳಿಗೆ ಮಾದರಿಯಾಗಿದ್ದರು. ನಂಬಿದ ಸಿದ್ಧಾಂತ ಹಾಗೂ ವಿಚಾರಧಾರೆಗಳನ್ನು ಎಂತಹ ಸಂದರ್ಭಗಳಲ್ಲೂ ಕೂಡ ಬಿಟ್ಟುಕೊಡದ ಅಪರೂಪದ ರಾಜ ಕಾರಣಿಗಳ ಪೀಳಿಗೆಗೆ ಸೇರಿದ ಎಸ್ಸೆನ್ ಅವರ ಅಗಲಿಕೆ ಸಮಾಜಕ್ಕೆ ತುಂಬಲಾರದ ನಷ್ಟವಾಗಿದೆ.

- ಬಿ.ಡಿ. ಜತ್ತಿ, ಮಾಜಿ ಉಪರಾಷ್ಟ್ರಪತಿ



ಕರ್ನಾಟಕ ಏಕೀಕರಣದ ಬಗ್ಗೆ ಹೋರಾಡಿದಂತಹ ವ್ಯಕ್ತಿ ನಿಜಲಿಂಗಪ್ಪನವರು. ರಾಜ್ಯ ಮತ್ತು ರಾಷ್ಟ್ರ ರಾಜಕಾರಣದಲ್ಲಿ ಅಪರೂಪದ ವ್ಯಕ್ತಿಯಾಗಿದ್ದರು. ಆಧುನಿಕ ಕರ್ನಾಟಕದ ಶಿಲ್ಪಿ ಎನಿಸಿದ ಎಸ್ಸೆನ್ ಸರಳ ಹಾಗೂ ಮೇಧಾವಿ ರಾಜಕಾರಣಿ. ಭ್ರಷ್ಟಾಚಾರದ ವಿರುದ್ಧ ಸೆಣಸಿದ ಧೀಮಂತ ನಾಯಕ. ಇವರ ಅಗಲಿಕೆ ಕರ್ನಾಟಕಕ್ಕಷ್ಟೇ ಆದ ನಷ್ಟವಲ್ಲ, ಇಡೀ ದೇಶಕ್ಕೆ ಆದ ನಷ್ಟ. ಅವರು ಹಾಕಿಕೊಟ್ಟ ಮಾರ್ಗದಲ್ಲಿ ಎಲ್ಲರೂ ನಡೆದು ಅವರಿಗೆ ಶ್ರದ್ಧಾಂಜಲಿ ಅರ್ಪಿಸೋಣ.

- ವಿ.ಎಸ್. ರಮಾದೇವಿ, ಕರ್ನಾಟಕ ರಾಜ್ಯಪಾಲರು



ರಾಜಕಾರಣದಲ್ಲಿ ಆದರ್ಶ ವ್ಯಕ್ತಿ ಎಂದು ಯಾರನ್ನಾದರೂ ಗುರುತಿ ಸುವುದಿದ್ದರೆ ಅದು ನಿಜಲಿಂಗಪ್ಪ ನವರನ್ನು ಮಾತ್ರ. ಅವರದು ಜೀವನ ದಲ್ಲಿ ಪಾರದರ್ಶಿಕತ್ವ, ಪ್ರಾಮಾಣಿಕತೆ ಮೈಗೂಡಿಸಿಕೊಂಡು, ನಂಬಿದ ತತ್ವ ಗಳಿಗೆ ಕಡೆಯವರೆಗೆ ಬದ್ಧವಾದ ವ್ಯಕ್ತಿತ್ವ. ಅವರ ಸಾವಿನಿಂದ ಬಹುದೊಡ್ಡ ಮಾರ್ಗದರ್ಶಕರನ್ನು ಕಳೆದು ಕೊಂಡಂತಾಗಿದೆ. ಕರ್ನಾಟಕದಲ್ಲಿ ಗಾಂಧಿಯುಗದ ಕೊನೆಯ ಕೊಂಡಿ ಕಳಚಿ ದಂತಾಗಿದೆ.

- ಎಸ್.ಎಂ. ಕೃಷ್ಣ, ಕರ್ನಾಟಕ ಮುಖ್ಯಮಂತ್ರಿಗಳು



ಹಿರಿಯ ಮುತ್ಸದ್ದಿ ಶ್ರೀ ಎಸ್. ನಿಜಲಿಂಗಪ್ಪನವರ ಅಂತ್ಯಕ್ರಿಯೆಯಲ್ಲಿ ಉಪರಾಷ್ಟ್ರಪತಿ ಶ್ರೀ ಕೃಷ್ಣಕಾಂತ್, ರಾಜ್ಯಪಾಲ ಶ್ರೀಮತಿ ವಿ.ಎಸ್. ರಮಾದೇವಿ, ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ, ಕೇಂದ್ರ ಸಚಿವರಾದ ಶ್ರೀ ಮುರಳಿ ಮನೋಹರ ಜೋಷಿ, ಶ್ರೀ ಅನಂತಕುಮಾರ್, ಕಾಂಗ್ರೆಸ್ ಧುರೀಣ ಶ್ರೀ ಗುಲಾಂ ನಬಿ ಆಜಾದ್, ಬಿ.ಜೆ.ಪಿ. ನಾಯಕ ಶ್ರೀ ಬಿ.ಎಸ್. ಯಡಿಯೂರಪ್ಪ ಮೊದಲಾದ ಗಣ್ಯರು ಭಾಗವಹಿಸಿದ್ದರು.

ಬೊಮ್ಮಾಯಿಯವರು ಬೆಂಗಳೂರಿನಲ್ಲಿ ಮನೆ ಕೊಡುವುದಾಗಿ ನೀಡಿದ ಆಹ್ವಾನವನ್ನು ನಯವಾಗಿ ತಿರಸ್ಕರಿಸಿದ ಮಹಾನ್ ಆದರ್ಶ ವ್ಯಕ್ತಿ.

**ಅಪರೂಪದ ವ್ಯಕ್ತಿತ್ವ**

ಎಂಟು ವರ್ಷಗಳ ಕಾಲ ರಾಜ್ಯದ ಮುಖ್ಯಮಂತ್ರಿಯಾಗಿ, ನಂತರ ರಾಷ್ಟ್ರದ ಉನ್ನತ ಸ್ಥಾನದಲ್ಲಿದ್ದ ಶ್ರೀ ನಿಜಲಿಂಗಪ್ಪನವರು ತಮಗಾಗಿ ಏನೂ ಮಾಡಿಕೊಂಡವರಲ್ಲ. ವಕೀಲಿ ವೃತ್ತಿಯಲ್ಲಿದ್ದಾಗ ಚಿತ್ರದುರ್ಗದಲ್ಲಿ ಮಾಡಿಕೊಂಡ ಮನೆಯನ್ನು ಬಿಟ್ಟರೆ ಏನೂ ಸಂಪಾದಿಸಲಿಲ್ಲ. ಮನಸ್ಸು ಮಾಡಿದ್ದರೆ; ಏನೆಲ್ಲಾ ಮಾಡಬಹುದಾಗಿತ್ತು. ಸ್ವಂತಕ್ಕೆ ಓಡಾಡಲು ಒಂದು ಕಾರನ್ನು ಮಾಡಿಕೊಳ್ಳದ ಆದರ್ಶವ್ಯಕ್ತಿ. ಯಾರಾದರೂ ಸಭೆ-ಸಮಾರಂಭಗಳಿಗೆ ಆಹ್ವಾನಿಸಲು ಹೋದಾಗ, ಅವರು ಹೇಳುತ್ತಿದ್ದ ಮಾತು ಆಮಂತ್ರಿಸಲು ಹೋದವರನ್ನು ಮೂಕವಿಸ್ಮಿತರನ್ನಾಗಿಸುತ್ತಿತ್ತು. ಅವರು ವಿನಯಪೂರ್ವಕವಾಗಿಯೇ "ನನಗೆ ಬರಲು ಕಾರಿಲ್ಲ. ಬಸ್ಸಿನಲ್ಲಿ ಓಡಾಡಲು ಈ ಇಳಿವಯಸ್ಸಿನಲ್ಲಿ ದೇಹ ಒಪ್ಪುತ್ತಿಲ್ಲ. ಬಂದು ಹೋಗಲು ಕಾರಿನ ವ್ಯವಸ್ಥೆ ಮಾಡಿದರೆ ಬರುತ್ತೇನೆ ಅನ್ಯಥಾ ಭಾವಿಸಬೇಡಿ" ಎಂದು ಹೇಳುತ್ತಿದ್ದರು. ಅವರ ಪರಿಸ್ಥಿತಿಯನ್ನು ಕಂಡು ಈ ಸಮಾಜದಲ್ಲಿ ಇಂಥವರೂ ಇದ್ದಾರೆಯೇ? ಎಂದು ಆಶ್ಚರ್ಯಪಡುತ್ತಿದ್ದರು. ಅವರು ದೈವಾಧೀನರಾದಾಗ ಅವರ ಸಮಾಧಿ ಮಾಡಲು ತನ್ನದೆನ್ನುವ ಒಂದು ಚಿಕ್ಕ ಜಾಗವೂ ಇಲ್ಲವೆಂದು ತಿಳಿದಾಗ ಹೃದಯ ಭಾರವಾಯಿತು. ಕಣ್ಣುಗಳು ಮಂಜಾದವು. ಸಾಮಾನ್ಯರಲ್ಲಿ ಸಾಮಾನ್ಯರಾಗಿ ಬದುಕಿದ ಅವರ ಜೀವನ ಆದರ್ಶ, ಅನುಕರಣೀಯ. ಅವರ ನಡೆ-ನುಡಿ ಒಂದೇ ಆಗಿತ್ತು.





## ಮಠಾಧೀಶರ ನುಡಿಗೌರವ



ಜೀವನದುದ್ದಕ್ಕೂ ತಾವು ನಂಬಿದ ಜೀವನ ಮೌಲ್ಯಗಳಿಗೆ ಸ್ಪಂದಿಸಿದ ದೊಡ್ಡ ಚೇತನ. ಬದುಕಿನಲ್ಲಿ ಸರಳತೆಗೆ, ವಿದ್ವತ್ತಿಗೆ ಹೆಸರಾದ ನಿಜಲಿಂಗಪ್ಪನವರು ಯಾರ ಹಂಗಿಗೂ ಒಳಗಾಗದೆ ಪರಿಶುದ್ಧವಾದ ಬಾಳನ್ನು ಬಾಳಿದರು. ಯುವ ಪೀಳಿಗೆಗೊಂದು ಮಾರ್ಗದರ್ಶಕರಾಗಿದ್ದು, ಸಾರ್ವಜನಿಕ ರಂಗದಲ್ಲಿ ಸ್ವಚ್ಛ ಜೀವನದಿಂದ ವ್ಯಕ್ತಿಯ ಘನತೆಯನ್ನು ಎತ್ತಿ ಹಿಡಿದ ನಿಜಲಿಂಗಪ್ಪನವರು ಕರ್ನಾಟಕ ಎಂದೂ ಮರೆಯಲಾಗದ ಜನನಾಯಕರು, ವಿಚಾರವಾದಿಗಳು ಹಾಗೂ ಮಹಾನ್ ದೇಶಪ್ರೇಮಿ.

ಶತಾಯುವಾಗುವರೆಂಬ ನಿರೀಕ್ಷೆಯಲ್ಲಿದ್ದ ಕನ್ನಡ ಜನತೆಗೆ ಅವರ ನಿಧನ ತುಂಬಲಾರದ ದುಃಖವನ್ನು ತಂದಿದೆ.

**- ಜಗದ್ಗುರು ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು**
ಸುತ್ತೂರು ಮಠ, ಮೈಸೂರು



ನಿಜಲಿಂಗಪ್ಪ ಓರ್ವ ಪ್ರಾಮಾಣಿಕ ಹಾಗೂ ತುಂಬು ಬಾಳ್ವೆಯ ವ್ಯಕ್ತಿ. ಗ್ರಾಮೀಣಾಭಿವೃದ್ಧಿಯ ಹರಿಕಾರ. ಹಳ್ಳಿಯ ಜನತೆಯ ಬಗ್ಗೆ ಅಪಾರ ಅಭಿಮಾನ ಇಟ್ಟುಕೊಂಡಂತಹ ಚೇತನ ಅವರು. ಒಟ್ಟಿನಲ್ಲಿ ಮಹಾನ್ ವ್ಯಕ್ತಿ. ಅಂಥವರನ್ನು ಈ ನಾಡು ಕಳೆದುಕೊಂಡು ಮತ್ತಷ್ಟು ಬಡವಾಗಿದೆ.

**- ಡಾ. ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು,**
ಸಿರಿಗೆರೆ

೨೦ನೇ ಶತಮಾನದ ರಾಜಕಾರಣದ ಒಂದು ವಿಸ್ಮಯಿ ಎಂದರೆ ನಿಜಲಿಂಗಪ್ಪನವರು. ಅವರು ಗಾಂಧೀಜಿ ಸಂಸ್ಕೃತಿಯ ವಾರಸುದಾರರು. ನಿಜಲಿಂಗಪ್ಪ ಅವರ ಚಿಂತನೆಯಲ್ಲಿ ವೈಚಾರಿಕತೆಯ ಮೆರುಗಿತ್ತು. ಅಂತಹ ವ್ಯಕ್ತಿಯನ್ನು ನಾಡು ಇಂದು ಕಳೆದುಕೊಂಡಿದೆ.

**- ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಮಹಾಸ್ವಾಮಿಗಳು**
ಬೃಹನ್ಮಠ, ಚಿತ್ರದುರ್ಗ



ಶ್ರೀ ಎಸ್. ನಿಜಲಿಂಗಪ್ಪನವರ ಪಾರ್ಥಿವ ಶರೀರದ ಅಂತ್ಯಕ್ರಿಯೆಯ ಒಂದು ನೋಟ

ಎಸ್. ನಿಜಲಿಂಗಪ್ಪ

☎ 08194 / 22550
47, "ವಿನಯ", ವಿ. ಪಿ. ಬಡಾವಣೆ
ಚಿತ್ರದುರ್ಗ - 577 501

23-3-1999

[illegible]

ಶ್ರೀ ಎಸ್ಸೆನ್ ಅವರ ಕೈಬರಹ

**ಸೌಜನ್ಯಮೂರ್ತಿ**

ಕರ್ನಾಟಕದ ಏಕೀಕರಣಕ್ಕೆ ಅವರು ಮಾಡಿದ ಹೋರಾಟ ಸದಾ ಹಚ್ಚ ಹಸಿರು. ಅದರ ಬಗ್ಗೆ 'ನಾನು ಮಾಡಿದೆ' ಎಂಬ ಅಹಂ ಲವಶೇಷವೂ ಇರಲಿಲ್ಲ. 'ಭಾಷಾವಾರು ಪ್ರಾಂತವಾಗಬೇಕು ಎಂಬುದು ಗಾಂಧೀಜಿಯವರ ಅಭಿಪ್ರಾಯವಾಗಿತ್ತು. ನಮ್ಮ ಕರ್ನಾಟಕ ಏಕೀಕರಣಕ್ಕೆ ಸೇವೆ ಮಾಡಲು ಅವರೇ ನಮಗೆ ಪ್ರೇರಕರು. ಗಾಂಧೀಜಿ ಸಾಧಾರಣ ಮನುಷ್ಯರಲ್ಲಿ ಅವರು ನಿಜಕ್ಕೂ ಮಹಾತ್ಮ ಅವರ ಮಾರ್ಗದರ್ಶನದಲ್ಲಿ ಹೋಗುವಂತೆ ಆದದ್ದು ನನ್ನ ಪುಣ್ಯ. ಏಕೀಕರಣಕ್ಕೆ ಶ್ರಮಿಸಿದ್ದು ನಿಜ. ಅದಕ್ಕಾಗಿ ಅಸಂಖ್ಯ ರಾಜಕಾರಣಿಗಳು, ಸಾಹಿತಿಗಳು, ಕವಿಗಳು, ಜನಸಾಮಾನ್ಯರು ಎಲ್ಲರೂ ಶ್ರಮಿಸಿದ್ದಾರೆ. ನನ್ನೊಬ್ಬನದೇ ಹೆಚ್ಚುಗಾರಿಕೆ ಎಂದು ನಾನು ಹೇಳಿಕೊಳ್ಳಲಾರೆ' ಎಂಬ ಅವರ ಮಾತುಗಳು ಅವರ ಸೌಜನ್ಯಕ್ಕೆ, ವಿನಯಶೀಲತೆಗೆ ಮುಕುಟಪ್ರಾಯ.

ಅವರೆಂದೂ ಅಧಿಕಾರ, ಕೀರ್ತಿಗೆ ಹಂಬಲಿಸಿದವರಲ್ಲ. ಅವರ ನಿಷ್ಠೆ, ಶ್ರದ್ಧೆ, ಪ್ರಾಮಾಣಿಕತೆಗೆ ತಲೆಬಾಗಿ ಅಧಿಕಾರ, ಕೀರ್ತಿ ಬೆನ್ನಟ್ಟಿ ಬಂದವು. ಇವರು ಬೇಡವೆಂದರೂ ಅವು ಬಿಡಬೇಕಲ್ಲ! ಅವುಗಳಿಗೂ ಗೊತ್ತು ಇಂಥವರಿಂದ ತಮ್ಮ ಕೀರ್ತಿ, ಗೌರವ ಹೆಚ್ಚುವುದೆಂದು. ತಮಗೆ ಆಶ್ರಯ ನೀಡುವಂತೆ ದೈನ್ಯತೆಯಿಂದ ವಿನೀತವಾಗಿ ಬೇಡಿಕೊಂಡವು. ಆದರೆ ಅವರ ನಿಷ್ಠುರತೆ, ಸ್ಥಿತಪ್ರಜ್ಞೆಯ ಮುಂದೆ ನಿಲ್ಲದೆ ಹೋದವು. ರಾಷ್ಟ್ರದ ಅತ್ಯುನ್ನತ ಪದವಿ ರಾಷ್ಟ್ರಾಧ್ಯಕ್ಷರಾಗುವ ಸುವರ್ಣಾವಕಾಶವನ್ನು





ತೃಣವಾಗಿ ಕಂಡ, ವಿನಯವಾಗಿ ನಿರಾಕರಿಸಿದ ಮಹಾಪುರುಷ. ಅವರೊಬ್ಬ ಮಹಾತ್ಯಾಗಿ. ಬೇರೊಬ್ಬರ ಸಂತೋಷದಲ್ಲಿ ಸುಖ ಕಂಡವರು. ಜೀವನದುದ್ದಕ್ಕೂ ಅವರು ಸತ್ಯ, ಧರ್ಮ, ನೀತಿ, ಪ್ರಾಮಾಣಿಕತೆಯ ಮೆಟ್ಟಿಲುಗಳನ್ನು ಏರುತ್ತ ಇತರರಿಗೆ ದಾರಿದೀಪವಾದವರು. ಇವತ್ತು ಅಧಿಕಾರ, ಕೀರ್ತಿ ಬಯಸುವವರಿಗೆ ಶ್ರೀ ನಿಜಲಿಂಗಪ್ಪನವರ ಆದರ್ಶ, ಮಾನವೀಯ ಮೌಲ್ಯಗಳು ಬರೀ ವೇದಿಕೆಯ ಭಾಷಣಕ್ಕೆ ವಸ್ತುವಾಗಿರುವುದು ನಿಜಕ್ಕೂ ವಿಪರ್ಯಾಸ.

**ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷ**

ಶ್ರೀ ಎಸ್. ನಿಜಲಿಂಗಪ್ಪನವರ ಸೇವೆ, ಅವರ ಅನುಭವ ಶ್ರೀಮಂತಿಕೆ ಕರ್ನಾಟಕಕ್ಕೆ ಸೀಮಿತವಾಗಬಾರದು. ಅದು ಇಡೀ ದೇಶಕ್ಕೂ ದೊರೆಯುವಂತಾಗಬೇಕು ಎಂದು ಭಾವಿಸಿದ ರಾಷ್ಟ್ರನಾಯಕರು ಅವರನ್ನು ರಾಷ್ಟ್ರ ರಾಜಕಾರಣಕ್ಕೆ ಬರುವಂತೆ ಆಗ್ರಹಪೂರ್ವಕವಾಗಿ ವಿನಂತಿಸಿದರು. ಅವರ ಪ್ರೀತಿಯ ಆಹ್ವಾನವನ್ನು ಧಿಕ್ಕರಿಸಲಾಗದೆ ಒಪ್ಪಿಕೊಂಡರು. ಪರಿಣಾಮ ೧೯೬೮ರಲ್ಲಿ ಕರ್ನಾಟಕದ ಮುಖ್ಯಮಂತ್ರಿ ಸ್ಥಾನವನ್ನು ತ್ಯಜಿಸಿ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಳ್ಳುವುದರ ಮೂಲಕ ರಾಷ್ಟ್ರ ರಾಜಕಾರಣದ ಗದ್ದುಗೆಯೇರಿದರು. ಅವರಿಗೆ ಬಸವಣ್ಣನವರು ಮತ್ತು ಗಾಂಧೀಜಿ ಆದರ್ಶ ವ್ಯಕ್ತಿಯಾಗಿದ್ದರು. ಅವರ ತತ್ವ, ಸಿದ್ಧಾಂತಗಳನ್ನು ಅಳವಡಿಸಿಕೊಂಡು ಅದಕ್ಕೆ ಬದ್ಧರಾಗಿ ಶಿಸ್ತಿನ ಸಿಪಾಯಿಯಂತೆ ನಡೆದುಕೊಂಡರು. ಕಾಂಗ್ರೆಸ್ ಪಕ್ಷದ ವರ್ಚಸ್ಸನ್ನು ಉಜ್ವಲವಾಗಿ ಬೆಳಗುವಂತೆ ಮಾಡಿದರು. ದೇಶದ ಹಿತದ ದೃಷ್ಟಿಯಿಂದ ಅನೇಕ ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸಲು ತಮ್ಮನ್ನು ತೊಡಗಿಸಿಕೊಂಡರು. ನೆಹರೂ ನಂತರ ಕಾಂಗ್ರೆಸ್ ಪಕ್ಷದಲ್ಲಿ ಆದ ಬದಲಾವಣೆ, ಉಸಿರು ಕಟ್ಟುವಂತಹ ವಾತಾವರಣ ನಿರ್ಮಾಣವಾಗಿ, ಆದರ್ಶ ಮೌಲ್ಯಗಳು ದಾರಿ ತಪ್ಪಲಾರಂಭಿಸಿದವು. ನಡೆಯಬಾರದ ಅನೇಕ ಘಟನೆಗಳು ನಡೆದು ಶ್ರೀ ನಿಜಲಿಂಗಪ್ಪನವರಿಗೆ ಬೇಸರ, ನೋವು ಉಂಟಾಗಿ ಸಕ್ರಿಯ ರಾಜಕೀಯದಿಂದ ನಿವೃತ್ತರಾದುದು ದೇಶಕ್ಕಾದ ಒಂದು ದೊಡ್ಡ ನಷ್ಟ.

ತುರ್ತುಪರಿಸ್ಥಿತಿಯಲ್ಲಿ ಜೈಲುವಾಸವನ್ನು ಅನುಭವಿಸುವ ಸಂದರ್ಭದಲ್ಲಿ ಶ್ರೀ ನಿಜಲಿಂಗಪ್ಪನವರು ಶ್ರೀ ಮುರಾರ್ಜಿ ದೇಸಾಯಿ, ಶ್ರೀ ರಾಜಾಜಿ ಮೊದಲಾದ ರಾಷ್ಟ್ರನಾಯಕರೊಂದಿಗೆ ಸೇರಿ ಕಾಂಗ್ರೆಸ್ ಪಕ್ಷಕ್ಕೆ ಪರ್ಯಾಯವಾಗಿ ರಾಷ್ಟ್ರಮಟ್ಟದಲ್ಲಿ ಪಕ್ಷವನ್ನು ಸಂಘಟಿಸಿ ಚುನಾವಣೆಯಲ್ಲಿ ನಿಲ್ಲಬೇಕೆಂದು ಯೋಚಿಸಿ ಪಕ್ಷದ ಧ್ಯೇಯ, ಧೋರಣೆಗಳು, ತತ್ವಗಳು ಮೊದಲಾದವುಗಳನ್ನು ಮುಕ್ತ ಮನಸ್ಸಿನಿಂದ ಚರ್ಚಿಸಿ ಪ್ರಣಾಳಿಕೆಯನ್ನು ತಯಾರಿಸಿದರು. ಅವರು ರೂಪಿಸಿದ ಪ್ರಣಾಳಿಕೆಯಲ್ಲಿ ರಾಷ್ಟ್ರನಾಯಕರ ಅನುಭವ ಸಾಕಾರಗೊಂಡಿತ್ತು. ರಾಷ್ಟ್ರದ ಸಮಗ್ರ ದೃಷ್ಟಿಯನ್ನಿಟ್ಟುಕೊಂಡು ಎಲ್ಲರಿಗೂ ಒಳಿತಾಗುವಂತಹ ಅಂಶಗಳು ಪ್ರಣಾಳಿಕೆಯಲ್ಲಿ ಒಳಗೊಂಡಿತ್ತು. ಜನತೆಯ ಹಿತಕ್ಕಾಗಿ ರೂಪಿಸಿದ ಪಕ್ಷಕ್ಕೆ 'ಜನತಾ ಪಕ್ಷ' ಎಂದು ನಾಮಕರಣ ಮಾಡಿದರು.

ತುರ್ತು ಪರಿಸ್ಥಿತಿಯ ನಂತರ ಜನತಾಪಕ್ಷ ಚುನಾವಣೆಯಲ್ಲಿ ಜಯಭೇರಿ ಹೊಡೆದು ದೇಶದ ಆಡಳಿತ ಸೂತ್ರವನ್ನು ಹಿಡಿದು ಶ್ರೀ ಮುರಾರ್ಜಿ ದೇಸಾಯಿ ಅವರು ಪ್ರಧಾನಮಂತ್ರಿಗಳಾದರು. ಮಹಾತ್ಮ ಗಾಂಧೀಜಿ, ಜಯಪ್ರಕಾಶ್ ನಾರಾಯಣರ ಕನಸಿಗೆ ಸಾಕಾರರೂಪವನ್ನು ಕೊಡಲು ಪ್ರಾಮಾಣಿಕ ಪ್ರಯತ್ನವನ್ನು ಮಾಡಿದರು. ಆದರೆ ಕೆಲವರ ಅಧಿಕಾರ ಲಾಲಸೆಯ ಪರಿಣಾಮ, ಕೀಳು ರಾಜಕೀಯದಿಂದ ಅನಿವಾರ್ಯವಾಗಿ ಮುರಾರ್ಜಿ ದೇಸಾಯಿಯವರು ಅಧಿಕಾರದಿಂದ ನಿರ್ಗಮಿಸಬೇಕಾಯಿತು. ಆ ಸಂದರ್ಭದಲ್ಲಿ ಅವರು ತುಂಬಾ ನೋವಿನಿಂದ ತಮ್ಮ ಮನಸ್ಸಿನ ಭಾವನೆಗಳನ್ನು ಪತ್ರಕರ್ತರ ಮುಂದೆ ಹಂಚಿಕೊಂಡರು. "ರಾಷ್ಟ್ರನಾಯಕರಾದ ಶ್ರೀ ನಿಜಲಿಂಗಪ್ಪನವರು ದೇಶಕ್ಕೆ ಎರಡು ದೊಡ್ಡ ತಪ್ಪು ಮಾಡಿದರು. ಒಂದು ಶ್ರೀಮತಿ ಇಂದಿರಾ ಗಾಂಧಿಯವರನ್ನು ಅಧಿಕಾರಕ್ಕೆ ತಂದದ್ದು. ಮತ್ತೊಂದು ರಾಷ್ಟ್ರಪತಿಗಳಾಗಲು ನಿರಾಕರಿಸಿದ್ದು. ಅವರು ರಾಷ್ಟ್ರಪತಿಗಳಾಗಿದ್ದರೆ ಇವತ್ತು ಈ ಸ್ಥಿತಿ ಬರುತ್ತಿರಲಿಲ್ಲ" ಎಂದು ಹೇಳಿದ ಸುದ್ದಿಯನ್ನು ಪತ್ರಿಕೆಗಳಲ್ಲಿ ಓದಿದ ನೆನಪು. ಅವರ ಮಾತುಗಳು ಶ್ರೀ ಎಸ್. ನಿಜಲಿಂಗಪ್ಪನವರ ಸೇವೆ ದೇಶಕ್ಕೆ ಎಷ್ಟು ಅಗತ್ಯವಾಗಿತ್ತು, ಅವರ ವ್ಯಕ್ತಿತ್ವ ಎಂಥಹುದು ಎಂಬುದನ್ನು ಸೂಚಿಸುತ್ತದೆ.

**ಗೌರವ ಪ್ರಶಸ್ತಿ - ಪುರಸ್ಕಾರಗಳು**

ಶ್ರೀ ನಿಜಲಿಂಗಪ್ಪನವರು ರಾಜ್ಯಕ್ಕೆ, ರಾಷ್ಟ್ರಕ್ಕೆ ಸಲ್ಲಿಸಿದ ಅನುಪಮ ಸೇವೆಗಾಗಿ ಕರ್ನಾಟಕ ವಿಶ್ವವಿದ್ಯಾನಿಲಯ **'ಗೌರವ ಡಾಕ್ಟರೇಟ್'** ನೀಡಿ ತನ್ನ ಗೌರವವನ್ನು ಹೆಚ್ಚಿಸಿಕೊಂಡಿದೆ. ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಪ್ರತಿಷ್ಠಿತ ಗೌರವವಾದ **'ನಾಡೋಜ'** ಪ್ರಶಸ್ತಿಯನ್ನು ನೀಡಿ ಹೆಮ್ಮೆಪಟ್ಟುಕೊಂಡರೆ, ಕರ್ನಾಟಕ ಸರ್ಕಾರ ಕಳೆದ ವರ್ಷ **'ಕರ್ನಾಟಕ ರತ್ನ'** ಪ್ರಶಸ್ತಿಯನ್ನು ಅವರ ಮನೆಯ ಬಳಿಗೆ ಹೋಗಿ ನೀಡಿ ಧನ್ಯತೆಯನ್ನು ಪಡೆದುಕೊಂಡಿದೆ. ಈ ಎಲ್ಲಾ ಪ್ರಶಸ್ತಿಗಳಿಂದ ಅವರ ಗೌರವ ಹೆಚ್ಚಲಿಲ್ಲ. ಅವರಿಗೆ ನೀಡಿದ್ದರಿಂದ ಆ ಪ್ರಶಸ್ತಿಗಳಿಗೆ ಗೌರವ ಹೆಚ್ಚಾಯಿತು.

**ತುಂಬು ಜೀವನ**

ತೊಂಬತ್ತೇಳು ವಸಂತಗಳ ಸಿಹಿ-ಕಹಿಗಳನ್ನು ಅನುಭವಿಸಿ

ತುಂಬು ಜೀವನ ನಡೆಸಿದ ಅಪ್ಪಟ ಗಾಂಧಿವಾದಿ. ಈ ಶತಮಾನದ ರಾಜಕೀಯ ಹಿರಿಯ ಮುತ್ಸದ್ದಿ. ರಾಜಕೀಯ ಭೀಷ್ಮ ತೊಂಬತ್ತೆಂಟರ ವಸಂತದ ತಂಗಾಳಿ, ಹಸಿರು ಹೊತ್ತ ನಿಂತ ಪ್ರಕೃತಿಯ ಸೊಬಗನ್ನು ನೋಡಿ ಸವಿಯಲು ಉತ್ಸಾಹದಿಂದಿದ್ದರು. ಆದರೆ ಅವರು ಅನುಭವಿಸಿದ ತುಂಬು ಜೀವನ, ಅವರ ಧಮನಿಗಳಲ್ಲಿ ಹರಿಯುತ್ತಿದ್ದ ಪ್ರಾಮಾಣಿಕತೆ, ಉಜ್ವಲವಾದ ರಾಷ್ಟ್ರಪ್ರೇಮವನ್ನು ಕಂಡು ಆ ವಿಧಿಗೂ ಹೊಟ್ಟೆಕಿಚ್ಚು ಬಂದಿರಬೇಕು! ಆಗಸ್ಟ್ ೮ರ ರಾತ್ರಿ ತನ್ನ ಕಬಂಧ ಬಾಹುಗಳಿಂದ ಅಪ್ಪಿ ಎತ್ತಿಕೊಂಡ. ಅವರ ಸಾಮೀಪ್ಯ, ಸಾನ್ನಿಧ್ಯ ವಿಧಿಗೂ ಪ್ರಿಯವಾಗಿರಬೇಕು.

ಅವರು ಜೀವನವನ್ನು ತುಂಬಾ ಗಾಢವಾಗಿ ಪ್ರೀತಿಸುತ್ತಿದ್ದರು. ಅವರು ಸಭೆಯಲ್ಲಿ ಮಾತನಾಡುವಾಗಲೆಲ್ಲ *"ಇಷ್ಟೆಲ್ಲ ಗೊಂದಲಗಳಿದ್ದರೂ ಈ ಬದುಕನ್ನು ನಾನು ತುಂಬ ಪ್ರೀತಿಸುತ್ತೇನೆ. ನಾನು ಈ ಲೋಕದಲ್ಲಿ ಹೆಚ್ಚು ಕಾಲ ಇರಬೇಕೆಂದು ಬಯಸುತ್ತೇನೆ. ಈ ನಿಸರ್ಗ, ಈ ಜನ, ಈ ಲೋಕ ವ್ಯವಹಾರ ಸಾಮಾನ್ಯವಲ್ಲ. ಇದನ್ನೆಲ್ಲ ನೋಡಿ ಆನಂದ ಪಡಬೇಕು"* ಎಂದು ಹೇಳುತ್ತಿದ್ದರು. ಅವರ ಜೀವನ ಪ್ರೀತಿ ಅನನ್ಯವಾದುದು.

ಕರ್ಮಯೋಗಿ, ಶ್ರೇಷ್ಠಚಿಂತಕ, ಮಹಾನ್ ದಾರ್ಶನಿಕ, ವಿನಯಸಂಪನ್ನ, ತ್ಯಾಗಮೂರ್ತಿ, ಕರುಣಾಮಯಿ, ಅಪ್ರತಿಮ ರಾಷ್ಟ್ರಭಕ್ತ ಶ್ರೀ ಸಿದ್ಧವನಹಳ್ಳಿ ನಿಜಲಿಂಗಪ್ಪನವರ ಬಗ್ಗೆ ಬರೆಯಲು ಶಬ್ದಗಳಿಗೆ ತಡಕಾಡಬೇಕಾಗುತ್ತದೆ, ಹುಡುಕಾಡಬೇಕಾಗುತ್ತದೆ. ಯಾವ ಶಬ್ದಗಳನ್ನು ಬಳಸಿದರೂ ಕಡಿಮೆ ಎನಿಸುತ್ತದೆ. ರಾಜಕೀಯ ನೀತಿಜ್ಞ, ಮಾನವೀಯ ಮೌಲ್ಯಗಳ ಆರಾಧಕ ಶ್ರೀ ನಿಜಲಿಂಗಪ್ಪನವರಂಥವರು ತುಂಬಾ ವಿರಳ. ಅವರು ಬಿಟ್ಟುಹೋದ ಸ್ಥಾನವನ್ನು ಮತ್ತೊಬ್ಬರು ತುಂಬಲು ಸಾಧ್ಯವಿಲ್ಲ. ಶ್ರೀ ನಿಜಲಿಂಗಪ್ಪನವರಿಗೆ ಶ್ರೀ ನಿಜಲಿಂಗಪ್ಪನವರೇ ಸರಿಸಾಟಿ. ಇಂಥವರ ಮಧ್ಯೆ ನಾವಿದ್ದೇವಲ್ಲ ಎಂಬುದೇ ಸಮಾಧಾನ. ಅದು ನಮ್ಮ ಪುಣ್ಯ! ನಾವು ಪಡೆದುಕೊಂಡುಬಂದ ಪರಮ ಭಾಗ್ಯ. ಕರ್ನಾಟಕ ಇರುವತನಕ ಶ್ರೀ ನಿಜಲಿಂಗಪ್ಪನವರ ಹೆಸರು ಅಜರಾಮರ.

ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪನವರು ರಾಷ್ಟ್ರಕ್ಕೆ ಸಲ್ಲಿಸಿದ ಅನುಪಮ ಸೇವೆಗಾಗಿ ಭಾರತ ಸರ್ಕಾರ ಅವರಿಗೆ **'ಭಾರತರತ್ನ'** ಪ್ರಶಸ್ತಿಯನ್ನು ನೀಡಿ ಗೌರವಿಸಬೇಕಾಗಿತ್ತು. ಅದು ಭಾರತದ ದುರಾದೃಷ್ಟ. ಈಗ ಅವರಿಗೆ ಮರಣೋತ್ತರ ಪ್ರಶಸ್ತಿಯನ್ನು ನೀಡಿ ಗೌರವಿಸಿದರೆ ಪಂಚಭೂತಗಳಲ್ಲಿ ಲೀನವಾಗಿರುವ ಆ ಮಹಾನ್ ಚೇತನಕ್ಕೆ ಸಂತೋಷವೇನೂ ಆಗುವುದಿಲ್ಲ. ಆದರೆ ಆ ಪ್ರಶಸ್ತಿಗೆ ಸಂತೋಷವಾಗುತ್ತದೆ, ಗೌರವ ಹೆಚ್ಚುತ್ತದೆ.

□

## ಶ್ರೀ ನಿಜಲಿಂಗಪ್ಪನವರ ದೃಷ್ಟಿಯಲ್ಲಿ ಶ್ರೀಕ್ಷೇತ್ರದ ಸಾಮೂಹಿಕ ಪ್ರಾರ್ಥನೆ

ಅದು ಎಂದೂ ಮರೆದ, ಮರೆಯಲಾಗದ ಹಾಗೂ ಅತ್ಯಂತ ಸಂತೋಷಕರವಾದ, ಸಂಪೂರ್ಣ ತೃಪ್ತಿತರುವ,ಆನಂದದಾಕ ದೃಶ್ಯ. ಸುಮಾರು ಐದುಸಾವಿರ ವಿದ್ಯಾರ್ಥಿಗಳು ಒಟ್ಟಿಗೆ ಸೇರಿ, ಸಮವಸ್ತ್ರ ಧರಿಸಿ, ಒಂದು ಸಭಾಂಗಣದಲ್ಲಿ ಪ್ರಾರ್ಥನೆ ಸಲ್ಲಿಸಿದರು. ಅವರ ಎದುರಿನಲ್ಲಿ ಶ್ರೀ ಸ್ವಾಮಿಗಳವರು ಮಕ್ಕಳಿಗೆ ಬೋಧನೆ ಮಾಡಿದರು. ಇದು ಮೇಲೆ ಹೇಳಿದ ಅನುಭವ. ವೈಶಿಷ್ಟ್ಯವೇನೆಂದರೆ ಆ ಮಕ್ಕಳೆಲ್ಲರೂ ಅತ್ಯಂತ ಬಡಕುಟುಂಬದವರು. ಮತ್ತೊಂದು ವೈಶಿಷ್ಟ್ಯವೆಂದರೆ ಅವರಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಅನಾಥರು, ಬಹುಶಃ ತಂದೆ ತಾಯಿಗಳು ಯಾರೆಂದು ಅರಿಯದವರೂ ಇದ್ದರೆಂದು ನನ್ನ ಆಲೋಚನೆ. ಇದಕ್ಕಿಂತ ಹೆಚ್ಚಿನ ವೈಶಿಷ್ಟ್ಯವೆಂದರೆ ಹಾಗೂ ಎಲ್ಲರು ಅನುಸರಿಸಬೇಕಾದ ವೈಶಿಷ್ಟ್ಯವೆಂದರೆ ಆ ಮಕ್ಕಳು ಎಲ್ಲ ಜಾತಿಯವರು, ಎಲ್ಲ ಕೋಮಿನವರು, ವೀರಶೈವರು, ಬ್ರಾಹ್ಮಣರು, ನಾಯಕರು, ಕುರುಬರು, ಮೇಲಾಗಿ ಹರಿಜನರು, ಜೊತೆಗೆ ಅಲ್ಪಸಂಖ್ಯಾತರು ಅಂದರೆ ಮುಸಲ್ಮಾನರು, ಕ್ರಿಶ್ಚಿಯನ್ನರು - ಇವರ ಮಕ್ಕಳೂ ಇದ್ದುದು.

ಇಂತಹ ಸಂಸ್ಥೆ ಹಾಗೂ ಇಷ್ಟು ದೊಡ್ಡ ಸಂಖ್ಯೆಯಲ್ಲಿ ನಡೆಸತಕ್ಕ ವಿದ್ಯಾರ್ಥಿನಿಲಯ ಹಿಂದುಸ್ತಾನದ ಬೇರೆಲ್ಲೂ ಇರುವ ಸಂಭವ ಇಲ್ಲ. ನಾನು ಹಿಂದೂಸ್ತಾನವನ್ನಲ್ಲದೆ, ಅರ್ಧ ಪ್ರಪಂಚವನ್ನು ಸುತ್ತಿದ್ದೇನೆ. ಅಲ್ಲಿ ಎಲ್ಲೂ ಇಂತಹ ಸಂಸ್ಥೆ ಕಂಡು ಬರಲಿಲ್ಲ. ಆದ್ದರಿಂದಲೇ ಆ ದಿನ ಕಂಡ ದೃಶ್ಯ ನನಗೆ ಎಂದೂ ಮರೆಯಲಾಗದುದು. ಆ ಮಕ್ಕಳಿಗೆ ಬೋಧಿಸಿದ ಗುರುಗಳು ಮತ್ತಾರೂ ಅಲ್ಲ, ಶ್ರೀ ಸಿದ್ಧಗಂಗಾ ಮಠದ ಪೂಜ್ಯಗುರುಗಳಾದ ಶ್ರೀ ಶ್ರೀ ಡಾ. ಶಿವಕುಮಾರ ಸ್ವಾಮಿಗಳವರು.

□







# ಅನುಭಾವ

- **ಗೊ.ರು. ಚನ್ನಬಸಪ್ಪ,**
ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು-೮೨

***ಹೃದಯದ ಬಾವಿಯ ತಡಿಯಲ್ಲಿ ಒಂದು ಬಾಳೆ ಹುಟ್ಟಿತ್ತು***
***ಆ ಬಾಳೆಯ ಹಣ್ಣ ಮೆಲಬಂದ ಸರ್ಪನ ಪರಿಯ ನೋಡಾ !***
***ಬಾಳೆ ಬೀಗಿ ಸರ್ಪವೆದ್ದಡೆ ನಿರಾಳವು ಕಾಣು ಗುಹೇಶ್ವರಾ !***

ಇದು ಅನುಪಮ ಜ್ಞಾನಿ ಅಲ್ಲಮಪ್ರಭುವಿನ ಒಂದು ಅರ್ಥಪೂರ್ಣ ವಚನ. ನಮ್ಮ ಹೃದಯ ಭಾವ ತುಂಬಿದ ಒಂದು ಬಾವಿ. ಅದರ ದಡ ಸಹಜವಾಗಿ ತಂಪಾಗಿದೆ. ಅಲ್ಲಿ ಭಕ್ತಿ ಎಂಬ ಬಾಳೆ ಹುಟ್ಟಿದೆ. ಆ ಭಕ್ತಿಯ ಬಾಳೆ ನಿಷ್ಠೆ ಎಂಬ ಹಣ್ಣು ಬಿಟ್ಟಿದೆ. ಆ ಹಣ್ಣು ತಿನ್ನಲು ಚಾಂಚಲ್ಯವೆಂಬ ಸರ್ಪಬಂದಿದೆ. ಅದು ಹಣ್ಣಿಗೆ ಬಾಯಿ ಹಾಕಿದರೆ ಹಣ್ಣಿನಲ್ಲಿ ವಿಷ ಸೇರಿಬಿಡುತ್ತದೆ. ಇದು ಭಕ್ತಿಯ ಬಾಳೆಗೆ ಗೊತ್ತು. ಎಂತಲೇ ತಕ್ಷಣ ಎಚ್ಚರವಹಿಸಿ ಬೀಗಿ ನಿಲ್ಲುತ್ತದೆ ಎಂದರೆ ದೃಢಗೊಳ್ಳುತ್ತದೆ. ಬಾಗಿದ ಬಾಳೆ ಬೀಗಿ ನಿಂತುದನ್ನು ಕಂಡು ಹೆದರಿ ಸರ್ಪ ಜಾಗಬಿಟ್ಟು ಹೋಗುತ್ತದೆ. ಸರ್ಪ ಹೋದ ಮೇಲೆ ಬಾಳೆಗೆ ಸಹಜ ನಿರಾಳ ನಿಶ್ಚಿಂತೆ ತಾನೆ?

ಬಾಳೆ ಬೀಗುವುದೆಂದರೆ ಭಕ್ತಿಯ ನಿಷ್ಠೆ ಬಲಗೊಳ್ಳುವುದು. ಸರ್ಪವೆದ್ದಡೆ ಎಂದಡೆ ಚಾಂಚಲ್ಯ ನೀಗುವುದು. ಭಕ್ತಿ ದುರ್ಬಲಗೊಂಡರೆ ನಮ್ಮ ನಿಷ್ಠೆಗೆ ಚಾಂಚಲ್ಯದ ವಿಷ ಸೇರಿ ಬದುಕು ಹಾಳಾಗಿಬಿಡುತ್ತದೆ. ಅದರ ಭಯ ತಪ್ಪಿದರೆ ಬಾಳು ನಿಶ್ಚಿಂತ. 'ಬಾಳೆ ಬೀಗಿ ಸರ್ಪವೆದ್ದಡೆ ನಿರಾಳವು ಕಾಣಾ ಗುಹೇಶ್ವರಾ' ಎಂಬ ಮಾತನ್ನು ನಾನು ಸರಳಗೊಳಿಸಿ ಈ ಅರ್ಥ ಹೇಳಿದ್ದೇನೆ.

ಆದರೆ ದಾರ್ಶನಿಕ ವ್ಯಾಖ್ಯಾನವೇ ಬೇರೆ ಇದೆ. ಮೂಲಾಹಂಕಾರದ ಈ ತನುವೆಂಬ ಕೂಪದ ದಂಡೆಯಲ್ಲಿ ಅಷ್ಟದಳ ಕಮಲ ಅರಳುತ್ತದೆ. ಆ ಕಮಲದ ಫಲಕ್ಕೆ ಅಧಃಕುಂಡಲಿನಿ ಆಕರ್ಷಿತವಾಗುತ್ತದೆ. ಆಗ ಆ ಕಮಲ ಬಿಚ್ಚಿಕೊಂಡು ಅದಃಕುಂಡಲಿನಿ ಜಾಗೃತಗೊಂಡರೆ ನಿಶ್ಚಿಂತ ಸ್ಥಿತಿ. ಎಂದರೆ ಅಂತಃಕರಣದ ಬಾವಿಯ ದಂಡೆಯಲ್ಲಿ ವಿವೇಕವೆಂಬ ಬಾಳೆ ಹುಟ್ಟಿದೆ. ಆ ಬಾಳೆಯ ಹಣ್ಣು ತಿನ್ನಲು ಮನಸ್ಸು ಹಾತೊರೆಯುತ್ತದೆ. ಆಗ ವಿವೇಕ ಜಾಗೃತವಾಗಿ ಚಂಚಲ ಮನಸ್ಸು ಮಾಯವಾದರೆ ನಿಶ್ಚಿಂತ ಸ್ಥಿತಿ - ಹೀಗೆಯೂ ಅರ್ಥಮಾಡಬಹುದು.

ಇದು ಧ್ಯಾನಯೋಗ-ಶಿವಯೋಗ ಸಂಬಂಧದ ಅನುಭವ. ಮಾತಿಗೆ ನಿಲುಕುವುದಲ್ಲ. ಅಲ್ಲಿ ಶಬ್ದ ನಿಶಬ್ದ ವಾಗುತ್ತದೆ; ದೃಶ್ಯ; ಅದೃಶ್ಯವಾಗುತ್ತದೆ. ಕಾಯ ಅಕಾಯ ವಾಗುತ್ತದೆ; ಮನ ಬರಿದಾಗುತ್ತದೆ; ಅದೊಂದು ಅನಿರ್ವಚ ನೀಯ ಸ್ಥಿತಿ.

**'ಅನುಭಾವ'** ಎನ್ನುವುದು ಕಣ್ಣಿಗೆ ಕಾಣುವ ವಸ್ತುವಲ್ಲ; ಮಾತಿಗೆ ನಿಲುಕುವ ವಸ್ತುವಲ್ಲ. ಅದನ್ನು ನನ್ನಂಥವರು ನುಡಿಗಟ್ಟಿ ಹೇಳಲು ಸಾಧ್ಯವಿಲ್ಲ. ಆದರೂ ಶರಣರ ನುಡಿಗನ್ನಡಿಯಲ್ಲೇ ಅದನ್ನು ಕಂಡು ನಮಗೆ ಸಾಧ್ಯವಾದಷ್ಟು ಅರ್ಥಮಾಡಿಕೊಳ್ಳಲು ಸಾಧ್ಯವಿದೆ ಎಂದು ನಾನು ತಿಳಿದಿದ್ದೇನೆ. 'ಅನುಭಾವ' ಕುರಿತಂತೆ ಚನ್ನಬಸವಣ್ಣನವರ ಒಂದು ವಚನ ಹೀಗಿದೆ :

***ಅನುಭಾವ ಅನುಭಾವವೆಂದರು***
***ಅನುಭಾವವೆಂಬುದು ನೆಲದ ಮರೆಯ ನಿಧಾನ ಕಾಣಿರೋ***
***ಅನುಭಾವವೆಂಬುದು ಅಂತರಂಗದ ಶುದ್ಧಿ ಕಾಣಿರೋ***
***ಅನುಭಾವವೆಂಬುದು ರಚ್ಚೆಯ ಮಾತೆ?***
***ಅನುಭಾವವೆಂಬುದು ಸಂತೆಯ ಸುದ್ದಿಯೆ?***
***ಅನುಭಾವವೆಂಬುದು ಬೀದಿಯ ಪಸರವೆ?***
***ಏನೆಂಬೆ ಹೇಳಾ ಮಹಾಘನವ !***

ಅನುಭಾವವೆಂಬುದು ಮಹಾಘನವೆನ್ನುತ್ತಾರೆ ಚನ್ನಬಸವಣ್ಣ. ಅದು ನೆಲದ ಮರೆಯ ನಿಧಾನ. ಅದಕ್ಕಿಂತ ನಮಗೆ ಸ್ಪಷ್ಟವಾಗುವುದು. ಅನುಭಾವವೆಂಬುದು **'ಅಂತರಂಗ ಶುದ್ಧಿ' ಎನ್ನುವ ಮಾತು. ಅನುಭಾವ ಸುಮ್ಮನೆ ಅಳವಡುವುದಲ್ಲ. 'ಸುತ್ತಿ ಸುತ್ತಿ ಬಂದಡಿಲ್ಲ; ಲಕ್ಷ ಗಂಗೆಯ ಮಿಂದಡಿಲ್ಲ; ತುಟ್ಟ ತುದಿಯ ಮೇರುಗಿರಿಯ ಮೆಟ್ಟಿ ಕೂಗಿಡಡಿಲ್ಲ; ನಿತ್ಯ ನೇಮ ದಿಂದ ತನುವ ಮುಟ್ಟಿಕೊಂಡಿಲ್ಲ; ಅತ್ತಲಿತ್ತ ಹರಿವ ಮನವ ಚಿತ್ತದಲ್ಲಿ ನಿಲಿಸಬಲ್ಲಡೆ, ಬಚ್ಚ ಬರಿಯ ಬೆಳಗು ಗುಹೇಶ್ವರನೆಂಬ ಲಿಂಗವು'** ಎನ್ನುವ ವಚನದಲ್ಲಿ ಅಲ್ಲಮನು ಅನುಭಾವದ ಬೆಳಕನ್ನು ಬಿತ್ತರಿಸುತ್ತಾನೆ. ಬಾಹ್ಯ ಆಚಾರಗಳಿಂದ ಅನುಭಾವ ಸಿದ್ಧಿಸುವುದಿಲ್ಲ. ಅದು ಅಂತರಂಗದ ಸಾಧನೆ. ಅತ್ತಲಿತ್ತ ಹರಿವ ಮನವ ನಿಲ್ಲಿಸಿದರೆ ಕಾಣುವ ಬೆಳಕು. ಅಲ್ಲಿ ಮತ್ತೇನನ್ನೂ ಕಾಣಲು ಸಾಧ್ಯವಿಲ್ಲ. **'ಬಚ್ಚಬರಿಯ ಬೆಳಗು'** ಮಾತ್ರ.

ಅಳವಟ್ಟ ಅನುಭಾವ ಮಾತಿನಿಂದ ಅಭಿವ್ಯಕ್ತಗೊಳಿಸಲಾಗದು. ಅದು ಮೂಕ ಕಂಡ ಕನಸಿನಂತೆ. ಕನ್ನಡಿಯೊಳಗಣ ರೂಪಿನಂತೆ. ಕಟ್ಟಿಗೆಯೊಳಗಣ ಅಗ್ನಿಯಂತೆ. ಅದು ಅಂತರ್ಗತ. ಒಂದು ವೇಳೆ **'ಅನುಭಾವಿ'**ಯಾದವನು ತಾನು ಹಾಗೆ

ಅಂದುಕೊಂಡರೆ ಅದು ದೋಷ. ಶರಣೆ ಅಮುಗೆ ರಾಯಮ್ಮ ಇದನ್ನು ಅತ್ಯಂತ ಕಟುವಾಗಿ ಹೇಳುತ್ತಾಳೆ :

**'ಅನುಭಾವಿ ಅನುಭಾವಿಗಳೆಂಬ ಅಜ್ಞಾನಿಗಳ ಮುಖವ ನೋಡಲಾಗದು'** ಎನ್ನುತ್ತಾಳೆ. **'ಕಂಗಳ ಮುಂದಣ ಕಾಯ, ಮನದ ಮುಂದಣ ಆಸೆ, ಅಂಗದಲ್ಲಿ ಅಹಂಕಾರವಾಗಿಪ್ಪವರ ಅನುಭಾವಿಗಳೆಂಬೆನೆ?'** ಎಂದು ಕೇಳುತ್ತಾಳೆ. ಅಮುಗೆ ರಾಯಮ್ಮ ತೋರಿಕೆಯ ಅನುಭಾವಿಗಳನ್ನು ಕಂಡು ಎಷ್ಟು ಕ್ರೋಧಗೊಳ್ಳುತ್ತಾಳೆ ಎಂದರೆ **'ಸೂಳೆಯ ಮನೆಯಲ್ಲಿಪ್ಪ (ದಾಸಿ) ಗವುಡಿ ಯಂತೆ, ತಮ್ಮ ತಮ್ಮ ತನುವ ಮುಂದುಗೊಂಡು ಕುರಿಗಳಂತೆ ತಿರುಗುವ ಜನರುಗಳ ಅನುಭಾವಿಗಳೆಂಬೆನೆ?'** ಎನ್ನುವಷ್ಟು.

ಅನುಭಾವಿಗೆ ಅಂಗ ಶೃಂಗಾರವಿರಬಾರದು. ಕಾಮ ಕ್ರೋಧಗಳಿರಬಾರದು. ನಾನು, ನನ್ನದು ಎಂಬ ಭ್ರಾಂತು ಭ್ರಮೆ ಇರಬಾರದು. ನನ್ನವರು ತನ್ನವರು ಎಂಬ ಸೀಮೆ ಇರಬಾರದು ಎಂದು ಹೇಳುವ ಅಮುಗೆ ರಾಯಮ್ಮ -

***ಅನುಭಾವಿಗಳ ಪರಿಯ ಹೇಳಿಹೆ ಕೇಳಿರಣ್ಣಾ***
***ನೀರಮೇಲಣ ತೆಪ್ಪದಂತೆ, ಸಮುದ್ರದೊಳಗಣ ಬೆಂಗುಂಡಿನಂತೆ***
***ಇರಬಲ್ಲಡೆ ಅನುಭಾವಿಗಳೆಂಬೆನಯ್ಯ***
***ವಚನಂಗಳ ಓದಿ ವಚನಂಗಳ ಕೇಳಿ***
***ಕಂಡ ಕಂಡ ಠಾವಿನಲ್ಲಿ ಬಂಡುಗೆಲೆವ ಜಗಭಂಡರ***
***ಆತ್ಮ ತೇಜಕ್ಕೆ ತಿರುಗುವ ವೇಷಧಾರಿಗಳ ಕಂಡು***
***ಅನುಭಾವಿಗಳೆಂದರೆ ಅಘೋರ ನರಕ ತಪ್ಪದು ಕಾಣಾ***
***ಅಮುಗೇಶ್ವರ !***

ಹೀಗೆ ಅನುಭಾವದ ನಿಜದ ಅನುವನ್ನು ಶರಣರು ನಡೆದು ತೋರಿಸಿದರು. ಕೇವಲ ನುಡಿಯಲಿಲ್ಲ. ಆದ ಕಾರಣವೇ ಅವರು ಎಂದೆಂದಿಗೂ ಪ್ರಸ್ತುತರಾಗುತ್ತಾರೆ.

ಸಾಧನೆಗೆ ಮಾರ್ಗ ತೋರುವ ಗುರು-ಜಂಗಮ, ಸಾಧನೆಯ ಮಾಧ್ಯಮವಾದ ಲಿಂಗ-ಇವೆಲ್ಲವೂ ಅನುಭಾವದ 'ಮಹ'ದ ಆನಂದ ದೊರೆಯುತ್ತಿದ್ದಂತೆ ಇಲ್ಲವಾಗಿ ಬಿಡುತ್ತವೆ. ಅನುಭಾವಿಗೆ ತತ್ವದ ಹಂಗಿಲ್ಲ, ಭಕ್ತಿಯ ಹಂಗಿಲ್ಲ, ಮುಕ್ತಿಯ ಹಂಗಿಲ್ಲ. ಅಂತಹ ಅನನ್ಯ ಸ್ಥಿತಿ ಅವನದು. ಇಂತಹ ಅನುಭಾವ ಸಾಹಿತ್ಯದ ಚಿಂತನೆ, ನಮ್ಮ ಬದುಕು ನಿರ್ಮಲವಾಗಲು ಸಹಾಯಕವಾಗುತ್ತದೆ. ಆಗ ಬದುಕು ಭಾರವೆನಿಸುವುದಿಲ್ಲ; ಮನಸ್ಸು ಮುದುಡಿಕೊಳ್ಳುವುದಿಲ್ಲ.

ಶರಣರು ಏರಿದ ಎತ್ತರ ನಿಜಕ್ಕೂ ಅದ್ಭುತ. ಅವರ ದೃಷ್ಟಿಯಲ್ಲಿ ಅನ್ನಕ್ಕೆ ಹಸಿವಾಗುತ್ತದೆ; ನೀರಿಗೆ ಬಾಯಾರುತ್ತದೆ; ಅಗ್ನಿಗೆ ಛಳಿಯಾಗುತ್ತದೆ; ಆಕಾಶ ಕೈಗೆ ಸಿಕ್ಕುತ್ತದೆ; ಗಾಳಿ ಹಿಡಿತಕ್ಕೆ ಒಳಗಾಗುತ್ತದೆ! ನಾವು ಕಟ್ಟಿಗೆಯನ್ನು ಸುಡಲು ಅಗ್ನಿಯನ್ನು ಬಳಸಿದರೆ ಅವರು ಆ ಅಗ್ನಿಯನ್ನೇ ಸುಡುತ್ತಾರೆ; ನಾವು ಕೊಳಕನ್ನು ತೊಳೆಯಲು ನೀರನ್ನು ಬಳಸಿದರೆ ಅವರು ನೀರನ್ನೇ ತೊಳೆಯುತ್ತಾರೆ. ಅವರ ಅನುಭಾವ ಎಂತಹುದೆಂದರೆ ಬಯಲಿಗೆ ಬೆಂಕಿ ಹಚ್ಚಿ ಬರುವ ಬೂದಿಯನ್ನು ಭಸ್ಮಮಾಡಿ ಹಣೆಗೆ ಧರಿಸಿಕೊಳ್ಳುವಂತಹುದು! ಆ ಎತ್ತರಕ್ಕೆ ಏರಲು ನಮಗೆ ಸಾಧ್ಯವಾಗದಿರಬಹುದು. ಆದರೆ ಅವರ ಹಾದಿಯಲ್ಲಿ ನಡೆದರೂ ಸಾಕು, ನಾವು ನಿಶ್ಚಿಂತೆ-ನೆಮ್ಮದಿಗಳ ನೆರಳಲ್ಲಿ ನಿಲ್ಲಲು ಸಾಧ್ಯವಾದೀತು!

## ಮನವಿ

**ಶ್ರೀಮಠ ತ್ರಿವಿಧ ದಾಸೋಹಕ್ಕೆ ಅರ್ಪಿತವಾದ ಸೇವಾಸಂಸ್ಥೆ. ಬಸವಾದಿ ಪ್ರಮಥರ ಜೀವನ ಶೈಲಿಗೆ ಪ್ರಯೋಗಶಾಲೆಯಾಗಿರುವ ಭಕ್ತಿ-ಜ್ಞಾನ-ಕಾಯಕಗಳ ಪವಿತ್ರ ಕ್ಷೇತ್ರ. ಪ್ರತಿನಿತ್ಯ ಸನಿವಾಸಿ ವಿದ್ಯಾರ್ಥಿಗಳನ್ನು ಒಳಗೊಂಡಂತೆ ಯಾತ್ರಾರ್ಥಿಗಳನ್ನು ಸೇರಿ ಹದಿನೈದು ಸಾವಿರ ಭಕ್ತಾದಿಗಳು ದಾಸೋಹದಲ್ಲಿ ಪ್ರಸಾದ (ಭೋಜನ)ವನ್ನು ಸ್ವೀಕರಿಸುತ್ತಾರೆ. ಪರಮಪೂಜ್ಯ ಶ್ರೀಶ್ರೀಗಳವರ ಈ ಮಹಾಸೇವೆಯನ್ನು ಮನಗಂಡ ಶ್ರೀಮಠದ ಹಳೆಯ ವಿದ್ಯಾರ್ಥಿಗಳು, ಭಕ್ತಾದಿಗಳು, ಅಭಿಮಾನಿಗಳು ಮತ್ತು ಹಿತೈಷಿ ಉದಾರಿಗಳು "ಮಹಾದಾಸೋಹ ನಿಧಿ" ಯೋಜನೆಯನ್ನು ರೂಪಿಸಿ ಈಗಾಗಲೇ ಕಾರ್ಯರೂಪಕ್ಕೆ ತಂದಿರುವುದನ್ನು ತಿಳಿಸಲು ಸಂತೋಷವಾಗುತ್ತದೆ.**

**'ಮಹಾ ದಾಸೋಹ'ಕ್ಕಾಗಿ ಸೇವಾ ಕೈಂಕರ್ಯದಲ್ಲಿ ಸದಸ್ಯರಾಗಬಯಸುವವರು 2,101 ರೂ.ಗಳನ್ನು ಸಲ್ಲಿಸಿ ತಮ್ಮ ಮಾತಾಪಿತೃಗಳ ಅಥವಾ ತಾವು ಇಚ್ಛಿಸಿದ ಬಂಧು-ಬಳಗದವರ ಸ್ಮರಣಾರ್ಥ ಸೇವೆ ನಡೆಸಲು ಅವಕಾಶವಿರುತ್ತದೆ.**

**ಉದ್ದೇಶಿತ ಕಾಣಿಕೆಯನ್ನು ನಿಶ್ಚಿತ ಠೇವಣಿಯಲ್ಲಿಟ್ಟು, ಅದರಿಂದ ಬರುವ ಬಡ್ಡಿ ಹಣದಿಂದ ಸೇವಾನಮ್ರರು ಸೂಚಿಸಿದ ಒಂದು ದಿನ ಯಥೋಚಿತವಾಗಿ ದಾಸೋಹ ಸೇವೆ ಮಾಡಲಾಗುತ್ತದೆ.**

**ಈ ಪುಣ್ಯಾವಕಾಶವನ್ನು ಈಗಾಗಲೇ ಅನೇಕ ಸದ್ಭಾವಿಗಳು ಸಹಕರಿಸಿ ಯೋಜನೆ ಫಲಪ್ರದವಾಗಲು ಮುಂದೆ ಬಂದಿದ್ದಾರೆ. ತಾವು ಸದಸ್ಯರಾಗಲು ಮುಂದೆ ಬರುತ್ತೀರೆಂದು 'ಸಿದ್ಧಗಂಗಾ' ಆಶಿಸುತ್ತದೆ.**





# ಅರವತ್ತುಮೂರು ಪುರಾತನ ಶರಣರು

(ಕಳೆದ ಸಂಚಿಕೆಯಿಂದ)



- ಡಾ. ಬಿ.ಎಸ್. ಸ್ವಾಮಿ
ಕಾರ್ಯಕ್ರಮ ನಿರ್ವಹಣಾಧಿಕಾರಿ,
ಆಕಾಶವಾಣಿ, ಬೆಂಗಳೂರು.

ಸವಣರು ಮತ್ತೆ ಬಿಡಲಿಲ್ಲ. ತಿರುಜ್ಞಾನಿ ಸಂಬಂಧಿಗಳನ್ನು ಯಾವ ಮತ ಶ್ರೇಷ್ಠ ಎಂಬುದರ ಚರ್ಚೆಯಾಗಲಿ ಎಂದರು. ತಿರುಜ್ಞಾನಿಗಳು ಓಲೆಯೊಂದರಲ್ಲಿ "ಓಂ ನಮಃ ಶಿವಾಯ" ಹಾಕಿದರು, ಯಾರದು ಉರಿವುದೋ ಅವರದು ಶ್ರೇಷ್ಠವಲ್ಲ ಎಂದು ಪಂಥ ಕಟ್ಟಿದರು.

ಜಿನರ ಓಲೆ ಉರಿಯಿತು. ಅಷ್ಟಕ್ಕೆ ಬಿಡದ ಜಿನರು ಮಡಿಕೆಯಲ್ಲಿ ಘಟ ಸರ್ಪವೊಂದನ್ನಿಟ್ಟು, ಅದರೊಳಗೆ ಕೈ ಹಾಕಿ ತೃಪ್ತಿ ಹೊಂದುವರೋ ಅವರೇ ಸರಿ ಎಂದರು. ತಿರುಜ್ಞಾನಿಗಳು ಅದರೊಳಗೆ ಕೈ ಹಾಕಿ ಹಾರ ತೆಗೆದಂತೆ ತೆಗೆದರು. ಜಿನ ಮಂತ್ರದೋಲೆ, ಶಿವ ಮಂತ್ರೋದಲೆ ಎರಡನ್ನು ನದಿಯಲ್ಲಿ ಹಾಕೋಣ ಯಾವುದು ಪ್ರವಾಹಕ್ಕೆ ಎದುರಾಗಿ ಬರುವುದೋ ಆ ಮತವೇ ಜಯಿಸಿದಂತೆ, ಸೋತವರನ್ನು ಪಾಂಡ್ಯ ರಾಜ ಶೂಲಕ್ಕೇರಿಸಲಿ, ಎಂದು ಪಣತೊಟ್ಟರು. ಅದರಲ್ಲೂ ಜೈನರೆ ಸೋತರು. ರಾಜ ರಾಣಿ ಮತ್ತಿಬ್ಬರಿಗೂ ತಿರುಜ್ಞಾನಿಗಳು ಶೈವೋಪದೇಶ ಮಾಡಿದರು.

ರಾಣಿ ಮಂಗಯಕ್ಕರಿಸಿ, ಮಸ್ತಕದಲ್ಲಿ ಹಸ್ತವಿರಿಸಿ, ನಿನ್ನ ಗರ್ಭದಲ್ಲಿ ಪಾರ್ವತಿ ಜನಿಸುವಳು ಎಂದು ಆಶೀರ್ವಾದ ಮಾಡಿದರು.

ಮುಂದೆ ತಿರುಜ್ಞಾನ ಸಂಬಂಧಿಗಳು ಚೋಳ ಮಂಡಲಕ್ಕೆಬಂದರು. ಅಲ್ಲಿ ತಿರುಕುಳಕುಂಡವೆಂಬ ಪುರದಲ್ಲಿ ಅಮರಗೋಪನೆಂಬಾತ ಇವರನ್ನು ಕಂಡು ಸತ್ಕರಿಸಿ ಕೇಳಿದ, "ನನಗೊಬ್ಬಳು ಪುತ್ರಿ ಇದ್ದಾಳೆ, ನಿಮಗೆ ಆಕೆಯನ್ನು ಕೊಟ್ಟು ವಿವಾಹ ಮಾಡಬೇಕೆಂಬ ಆಸೆಯಾಗಿದೆ. ನನ್ನ ಆಸೆಯನ್ನು ಪೂರೈಸಬೇಕು" ಎಂದು. ಅದಕ್ಕೆ ಅವರು "ಚಿಯಾಳಪುರದಲ್ಲಿ ನಮ್ಮ ತಂದೆ ತಾಯಿಯರಿದ್ದಾರೆ. ಅವರ ಸಮ್ಮತಿ ಬೇಕು" ಎಂದರು. ಹಾಗೆಯೇ ಆಗಲಿ, ಎಂದು ಮಂಗಳವಾದ್ಯದೊಡನೆ ಅಮರಗೋಪರರು ಮಗಳೊಡಗೂಡಿ ಅಲ್ಲಿನ ದೇವಾಲಯಕ್ಕೆ ಬಂದರು, ತಿರುಜ್ಞಾನ ಸಂಬಂಧಿಗಳನ್ನು ಶಿವ ಕೇಳಿದ "ಏನು ಬೇಕು ಕೇಳು ಕಂದ" "ಈ ಲೋಕದ ಬಾಳು ಸಾಕು, ಅಮರ ಗೋಪನ ಪರಿವಾರ ಸಮೇತ ನಿನ್ನುದರದಲ್ಲಿ ಇರಿಸಿಕೋ" ಎಂದು ಪ್ರಾರ್ಥಿಸಿದ. ಆಗ ಲಿಂಗ ಬಾಯ್ದೆರೆಯಲು ಎಲ್ಲರೂ ಕೈಲಾಸ ಸೇರಿ ಶಿವ ಸಾಯುಜ್ಯವನ್ನು ಪಡೆದರು.

### ೩೪. ಕುಲಶ್ಚರಿಯರ್

ತಮಿಳುನಾಡಿನ ಮಧುರೆಯಲ್ಲಿ ಕೂನಪಾಂಡ್ಯರಾಜ ಜೈನ ಮತಾವಲಂಬಿಯಾಗಿದ್ದ. ಆತನ ರಾಣಿ ಮಂಗಾಯಕ್ಕರಿಸಿ ಗುಪ್ತ ರೀತಿಯಲ್ಲಿ ಶಿವಭಕ್ತಳಾಗಿದ್ದಳು. ಆತನ ಮಂತ್ರಿ ಕುಲಶ್ಚಿರಿಯರ್ ಶಿವಭಕ್ತನಾಗಿದ್ದ. ತಿರುಜ್ಞಾನ ಸಂಬಂಧರು ಮಧುರೆಯ ಚೊಕ್ಕನೈನಾರರ ಮನೆಗೆ ಬಂದಿರಲು ಕುತಂತ್ರಿ ಜೈನರು, ಕೂನ ಪಾಂಡ್ಯನಲ್ಲಿ ಹೋಗಿ ಪುತ್ರನಂದಿ ಮೊದಲಾದ ಜೈನರನ್ನು ಕೊಲ್ಲಿಸಿದ. ತಿರುಜ್ಞಾನ ಸಂಬಂಧರು ಮತ್ತೆ ಪುರ ಪ್ರವೇಶ ಮಾಡಿದ್ದಾರೆ, ಆತನನ್ನು ಶಿಕ್ಷಿಸಬೇಕು. ಎಂದು ಆಜ್ಞಾಪಿಸಿದ. ಹಾಗೆಯೇ ಮಾಡಿದರು ಜಿನರು. ಆದರೆ ಆ ಬೆಂಕಿ ಆತನ ಹೊಟ್ಟೆಯನ್ನು ಹೊಕ್ಕಿ ಹೊರಳಾಡಿಸಿತು. ಆಗ ಯಾವ ಚಿಕಿತ್ಸೆ ಮಂತ್ರಕ್ಕೂ ಬಗ್ಗದಿರಲು ರಾಣಿ ತಿರುಜ್ಞಾನ ಸಂಬಂಧರನ್ನು ಅರಮನೆಗೆ ಕರೆಸಿ ಸತ್ಕರಿಸಿ, ತನ್ನ ಗಂಡನ ಶಾಪವನ್ನು ಪರಿಹರಿಸುವಂತೆ ಬೇಡಿದಳು. ಆಗ ಅವರು ಭಸ್ಮಧಾರಣೆ ಮಾಡಲು ಹೊಟ್ಟೆ ಉರಿ ಮಾಯವಾಯಿತು. ಆಗ ಸೌಂದರಪಾಂಡ್ಯ ಎಂದು ಕರೆದರು ತಿರುಜ್ಞಾನ ಸಂಬಂಧಿಗಳು. ರಾಜ ಕುತಂತ್ರ ಮಾಡಿದ, ಸಾವಿರದ ಇನ್ನೂರು ಮಂದಿ ಜಿನರನ್ನು ಶೂಲಕ್ಕೆ ಹಾಕಲು ಆಜ್ಞಾಪಿಸಿದ.ತಮ್ಮ ಮಂತ್ರಿ ಕುಲಶ್ಚರಿಯರ್‌ಗೆ. ಆಗ ಕುಲಶ್ಚರಿಯರ್‌ರು ಎಲ್ಲರನ್ನೂ ಶೂಲಕ್ಕೆ ತಂದು ನಿಲ್ಲಿಸಲು ತಾವು ಮಾಡಿದ್ದು ತಪ್ಪು ಎಂದರು. ಎಲ್ಲರಿಗೂ ಶಿವಮಂತ್ರ ಉಪದೇಶಿಸಿ ಅವರನ್ನು ಶಿವಾರಾಧಕರನ್ನಾಗಿ ಮಾಡಿದ. ಈಶ್ವರ ಈತನನ್ನು ಕೈಲಾಸಕ್ಕೆ ಕರೆದೊಯ್ದ. ಈತನ ಬಗ್ಗೆ ಮತ್ತಷ್ಟು ಕತೆಗಳಿವೆ. ಕುಲಶ್ಚರಿಯರರ್ ಮುಪ್ಪಾಗಲು ಶಿವನು ಮರಿದೇವರಾಗಿ ಈತನ ಬಳಿ ಪಾಠ ಕಲಿಯುತ್ತಿದ್ದ. ಒಮ್ಮೆ ಸರಿಯಾಗಿ ಪಾಠ ಒಪ್ಪಿಸದಿರಲು, ಗುರುವು ಆತನ ತಲೆಗೆ ಹೊಡೆಯಲು, ಶಿವನು ತನ್ನ ರೂಪು ತೋರಿ ಆತನನ್ನು ಕೈಲಾಸಕ್ಕೆ ಕರೆದೊಯ್ದ. ಈತ ಲಿಂಗಾಲಯಕ್ಕೂ ಭಾವಿಗೂ ಸೂತ್ರ ಕಟ್ಟಿ ಸ್ನಾನ ಮಾಡುತ್ತಿದ್ದ. ಒಮ್ಮೆ ಶಿವ ಸೂತ್ರ ಹರಿದು ನಿಲ್ಲಲು ಭಕ್ತ ತಡಕಾಡುತ್ತಾ ಬಂದು ಆತನ ತಲೆಯ ಮೇಲೆ ಹೊಡೆದು ಆತನ ಕೈಯಲ್ಲೇ ನೀರು ತರಿಸಿದ.

ಮಣಿಕಾಚಾರ್ಯನೆಂಬ ಹೆಸರಿನಿಂದ ಚೊಕ್ಕಗಣನಾಥನ ಗುಡಿಯಲ್ಲಿರುವ ಶಿವ ಪ್ರಿಯನಾಚಿ ಎಂಬ ಶರಣೆ ಅವನನ್ನು ವರಿಸಿದಳು. ಆಗ ಆಚಾರ್ಯ ಲಿಂಗವನ್ನು ಮಂಚದ ಮೇಲಿರಿಸಿ ಹೊರಟು ಹೋಗಲು ಆ ಲಿಂಗ ರಾತ್ರಿ ಆಕೆಗೆ ಪತಿಯಾಗಿ, ಬೆಳಗಿನಲ್ಲಿ ಲಿಂಗವಾಗಿರುತ್ತಿತ್ತು. ಕೊನೆಗೆ ಸತಿ ಪತಿಯರಿಬ್ಬರೂ ಕೈಲಾಸಕ್ಕೆ ಹೋದರು.

### ೩೫. ಸೌಂದರ ಪಾಂಡ್ಯ

ಪಾಂಡವ್ಯ ರಾಜ್ಯದ ಕೂಲ ಪಾಂಡ್ಯನು ಜೈನ ದೊರೆ ಪಗಲ್ಸೋಳ ಶಿವಾಧೀನವಾಗಲು ಅವನ ಮಗಳಾದ ಮಂಗರಸಿಯನ್ನು ಮದವೆಯಾದ.

ತಿರುಜ್ಞಾನ ಸಂಬಂಧಿಗಳು "ನಿಮ್ಮ ಸಂಪತ್ತೆಲ್ಲಾ ತೀರಿ ನೀವು ಶಿವಸಾಯುಜ್ಯವನ್ನು ಪಡೆಯುವಿರಿ." ಎಂದರು. ಕೆಲವು ದಿನಗಳಾದ ಮೇಲೆ ಅವರಿಗೆ ಶರ್ವಾಣಿ ಎಂಬ ಮಗಳಾದಳು. ಪಾರ್ವತಿಯೇ ಈ ಮಗಳು ಎಂಬ ಪ್ರತೀತಿ. ಅದ್ದೂರಿಯಾಗಿ ಮದುವೆ ಮಾಡಲು ಅಣಿ ಮಾಡಲು ಈಶ್ವರನೇ ಬಂದ. ಆಕೆಯನ್ನು ವರಿಸಿ, ಸೌಂದರ್ಯ ಪಾಂಡ್ಯ ಮತ್ತು ಮಂಗಾಯಕ್ಕರಿಸಿಯರನ್ನೂ ಕೈಲಾಸಕ್ಕೆ ಕರೆದೊಯ್ದು ಗಣಪದವಿ ನೀಡಿದ. (ಹೆಚ್ಚಿನ ವಿವರಗಳು ಪಿಳ್ಳೆನಯನಾರು ಕಥೆಯಂತೆ)

### ೩೬. ಪೇಳ್ಕುತ್ತರ್

ಮಣಿ ಮಂದ ಪುತ್ತೂರು ಪುರದಲ್ಲಿ ಪೇಳ್ಕುತ್ತರ್ (ವೇಳ್ಕುತ್ತರ್) ಗುರುವಿನಲ್ಲಿ ಅಪಾರ ಭಕ್ತಿ ಇಟ್ಟಿದ್ದ. ಗುರುಗಳು ಒಮ್ಮೆ "ನೀನು ಗುರುವಿನ ಬಳಿ ಇರುವುದಿಲ್ಲ ಈ ಪಾದುಕವನ್ನು ತೆಗೆದುಕೊಂಡು ಹೋಗಿ ಪೂಜಿಸಿ ಧನ್ಯನಾಗು" ಎನ್ನಲು ಪೇಳ್ಕುತ್ತರು ತಿರುಪಾಡುಗಳನ್ನು ಹಾಡುತ್ತಾ ಗುರುಧ್ಯಾನದಿಂದ ಭಕ್ತಿಯಲ್ಲಿ ಕಾಲ ಕಳೆಯುತ್ತಿದ್ದ. ಶಿವನಿಗೂ ಈತನ ಭಕ್ತಿ ಮುಟ್ಟಿತು. ಆತನ ಪರೀಕ್ಷಿಸಲು ಬಂದ.

ಪೇಳ್ಕುತ್ತರು ಒಂದು ದಿನ ಗುರುಧ್ಯಾನ ಮಾಡಿ, ಪಾದ ಪೂಜಿಸಿ, ಶಿವನು ಪ್ರತ್ಯಕ್ಷನಾದರೂ ಮುಖದಲ್ಲೇ ತನ್ನ ವಿಧೇಯತೆಯನ್ನು ಸೂಚಿಸಿದ. ಈತ ನಮಸ್ಕರಿಸದೇ ನಿಂತಿರುವುದನ್ನು ನೋಡಿ ಶಿವ ಬೆರಗಾದ. "ನಿನ್ನ ಚರಣವನ್ನೇ ಗುರುಚರಣವೆಂದು ಪೂಜಿಸುತ್ತಿರುವೆ. ಆದ್ದರಿಂದ ನಿನಗೆ ನಮಸ್ಕರಿಸಿದರೆ ಮಹತ್ವ ಎಂದು ತಿಳಿಯಲಾರೆ. ಈ ಶಿರದ ಮೇಲಿನ ಪಾದುಕ ನಿನ್ನದಲ್ಲವೇ?" ಎಂದು ಆತನ ಗುರುಭಕ್ತಿಗೆ ಮೆಚ್ಚಿ ಆತನನ್ನೂ ಕೈಲಾಸಕ್ಕೆ ಕರೆದೊಯ್ದ.

### ೩೭. ಚಿರುತೊಣೆಯಾಂಡರು

ಚೋಳ ಮಂಡಲದ ತಿರಿಪಾದರಿ ಪುರಿಯಲ್ಲಿ " ಚಿರುತೊಣಿ " ಎಂಬ ಶಿವಭಕ್ತ ಸದಾ ಶಿವ ಧ್ಯಾನ, ಕೀರ್ತನ, ಮಾಡುತ್ತಾ ತಾನು ಬೆಳೆದ ಹೂವು ಕಾಯಿ ಹಣ್ಣುಗಳಿಂದ ಪೂಜಿಸುತ್ತಾ ಇದ್ದ. ನಗರಾಧೀಶ್ವರನಿಗೆ ಗುರು ಲಿಂಗ ಜಂಗಮ ಸೇವೆ ಸತತವಾಗಿ ನಡೆಯುತ್ತಲೇ ಇತ್ತು. ಆತನಿಗೆ ಚೆಂಗಣೆಗಲೆ ಹೂವಿನಿಂದ ಶಿವನಿಗೆ ಪೂಜುವುದೆಂದರೆ ಅತ್ಯಂತ ಪ್ರೀತಿ. ಚಿರುತೊಣೆ ದೇವರಿಗೆ ಹೂವಿನ ಹಾರ ಕಟ್ಟುತ್ತಿರಲು ಕುಳಚಂಗ ರಾಜನ ಮಡದಿ ಆತ ಕಟ್ಟುತ್ತಿದ ಆ ಹೂವಿನ ಸೌಂದರ್ಯ ಪರಿಮಳಕ್ಕೆ ಮಾರು ಹೋಗಿ, ಆ ಹೂವು ಈಶ್ವರನಿಗೆ ಎಂದು ತಿಳಿಯದೆ ಅದರಲ್ಲಿ ಒಂದು ಹೂವನ್ನು ಎತ್ತಿ ಮೂಸಿದಳು. ಆಗ ಕುಪಿತನಾದ ಚಿರು ತೊಣೆಯಾಂಡರು ಆಕೆಯ ಮೂಗನ್ನು ಕತ್ತರಿಸಿದರು. ಅದನ್ನು ನೋಡಿದ ರಾಜನೂ ಸಹ ಮೂಸಿದ. ಮೂಗಿಗೆ ಶಿಕ್ಷೆಯಾಯಿತು. "ಅದನ್ನು ಮೂಸಲು ಎತ್ತಿಕೊಟ್ಟ ಕೈಗೂ ಸಹ ಶಿಕ್ಷಿಸಬೇಕು " ಎಂದು ಕೈಯನ್ನು ಕತ್ತರಿಸಿದನು. ಚಿರುತೊಣೆಯಾಂಡರ ಭಕ್ತಿಗೆ ಮೆಚ್ಚಿ ಈಶ್ವರ ಕೈಲಾಸಕ್ಕೆ ಕರೆದೊಯ್ದು ಗಣಪದವಿ ನೀಡಿದ. ಇನ್ನೊಂದು ಕತೆಯಲ್ಲಿ ಚಿರುತೊಣೆಯಾಂಡರು ಹೆಂಡತಿಯ ಮೂಗನ್ನೇ ಕತ್ತರಿಸುವುದು ಎಂದಿದೆ.

### ೩೮. ಕೊಲ್ಲುಲಿ ಯಾಂಡರು

ಚೋಳ ರಾಜ್ಯದಲ್ಲಿ 'ತಿರುವಣ್ಣಾಮಲೆ' ಎಂಬ ಪುರ. ಅಲ್ಲಿ ಕೊಲ್ಲುಲಿಯಾಂಡರು ಒಬ್ಬ ವ್ಯಾಪಾರಿ. (ಮತ್ತೊಂದು ಕಥೆಯಲ್ಲಿ ಚೋಳರಾಜನ ಸೇನಾಧಿಪತಿ) ಈತನು ದ್ರವ್ಯವನ್ನು ಜಂಗಮ ದಾಸೋಹ ತೃಪ್ತಿಗೇ ವಿನಯೋಗಿಸುತ್ತಿದ್ದ. ಒಮ್ಮೆ ಬರಗಾಲ ಬರಬಹುದೆಂದು ಧನಧಾನ್ಯ ಸಂಗ್ರಹಿಸಿ ಅದನ್ನು ಜಂಗಮರಿಗೆ ನೀಡಲು ಇಟ್ಟಿದ್ದ. ಒಮ್ಮೆ ವ್ಯಾಪಾರಕ್ಕೆ ಬೇರೆ ಊರಿಗೆ ಹೋಗುವಾಗ ತಂದೆ ತಾಯಿಯವರಿಗೆ ಹೇಳಿದ,

"ಧಾನ್ಯವನ್ನು ಬರಗಾಲ ಬಂದರೆ ಜಂಗಮ ತೃಪ್ತಿಗೆಂದು ಇಟ್ಟಿರುವೆ. ಅದನ್ನು ಅವರಿಗೆ ನೀಡಬೇಕು" ಎಂದು. ಊರಿಗೆ ಕ್ಷಾಮ ಬಂತು, ಕೊಲ್ಲುಲಿಯಾಂಡರರ ಬಂಧು ಬಾಂಧವರೆಲ್ಲಾ ಬಂದುಳಿದರು. ಜಂಗಮರಿಗೆ ಸಂಗ್ರಹಿಸಿಟ್ಟ ಧಾನ್ಯವನ್ನೆಲ್ಲಾ ಮುಗಿಸಿ ಹೋದರು. ದ್ವೀಪಾಂತರದಿಂದ ಬಂದ ಕೊಲ್ಲುಲಿಯಾಂಡರು ತಂದೆ ತಾಯಿಯರನ್ನು ಕೇಳಿದ "ಜಂಗಮ ಸೇವೆ ಚೆನ್ನಾಗಿ ಆಯಿತೇ?" ಎಂದು. ಅವರು ನೆಂಟರು ಬಂದು ತಿಂದು ಹೋದ ವಿಷಯವನ್ನು ಹೇಳಿದರು. "ನೆಂಟರಿಷ್ಟರೆಲ್ಲಾ ಬರಬೇಕು, ದ್ವೀಪಾಂತರದಿಂದ " ಎಂದು ನೆಂಟರಿಗೆಲ್ಲಾ ಹೇಳಿ ಕಳುಹಿಸಿದ, ಎಲ್ಲರೂ ಬಂದರು. ಆಗ ಆತ ಬಾಗಿಲು ಮುಚ್ಚಿ ಎಲ್ಲರನ್ನೂ ಕೊಚ್ಚಿ ಹಾಕಿದ. ಈ ಗಣಾಚಾರಿಯ ಪದ್ಧತಿಗೆ ಶಿವ ಮೆಚ್ಚಿ ಕೈಲಾಸಕ್ಕೆ ಕರೆದೊಯ್ದ.

ಮತ್ತೊಂದು ಕಥೆಯಲ್ಲಿ ಚೋಳರಾಜನ ಸೇನಾಧಿಪತಿ ಕೊಲ್ಲುಲಿಯಾಂಡರು ದಂಡೆತ್ತಿ ಹೋಗಿ ಹಿಂತಿರುಗಿದಾಗ ರಾಜನಿಂದ ಪಡೆದಿರುವ ಉಡುಗೊರೆಯಲ್ಲಿ ಅರ್ಧಭಾಗವನ್ನು ಬಂಧು ಬಾಂಧವರಿಗೆ ಕೊಡುವುದಾಗಿ ತಿಳಿಸಿ ಎಲ್ಲರನ್ನೂ ಬರಮಾಡಿ ಜಂಗಮ ದ್ರೋಹಿಗಳೆಂದು ನಿರ್ನಾಮ ಮಾಡಿದ. ಆತನ ಉತ್ಕಟ ಭಕ್ತಿಗೆ ಶಿವ ಮೆಚ್ಚಿ ಗಣಪದವಿಯನ್ನಿತ್ತ.

### ೩೯. ತಂಡೇಸ (ಚಂಡೇಶರ್)

ಚೋಳಮಂಡಲದಲ್ಲಿನ ಕಾವೇರಿ ತೀರದಲ್ಲಿ ಸಲ್ಲೀಲೆ ಎಂಬ ಪುರ, ಅಲ್ಲಿ ಹಠಮಾರಿ ಬ್ರಾಹ್ಮಣನಿಗೆ ಸಾತ್ವಿಕ ಮಗ ಜನಿಸಿದ. ಅವನೇ ತಂಡೇಸ, ಆತ ಲಿಂಗ ಪೂಜಾಸಕ್ತನಾಗಿದ್ದ. ಹಿಂದಿನ ಜನ್ಮದ ವಾಸನಾ ಬಲದಿಂದ ದಿನವೂ ಚಿಕ್ಕ ಚಿಕ್ಕ ಮರಳು ಲಿಂಗ ಮಾಡಿ ಪೂಜಿಸುತ್ತಿದ್ದ. ಇದು ತಂದೆಗೆ ಸಮ್ಮತಿಯಾಗಲಲ್ಲಿ. ಆತನಿಗೆ ಪೂಜೆವೊಂದಿದ್ದರೆ ಸಾಕು. ಊಟ, ತಿಂಡಿ ಯಾವುದೂ ಬೇಕಾಗುತ್ತಿರಲಿಲ್ಲ.

(ಮುಂದುವರಿಯುವುದು)





# ಮಲೆನಾಡಿನ ಮಾಣಿಕ್ಯ ಶ್ರೀ ಎನ್.ಬಿ. ಮಹಂತಗೌಡರು



*ಪ್ರತಿವರ್ಷ ಶ್ರೀಕ್ಷೇತ್ರದಲ್ಲಿ ಆಚರಿಸುವ ಗುರುವಂದನಾ ಮಹೋತ್ಸವದಲ್ಲಿ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಗಣ್ಯರಿಗೆ ಪ್ರಶಸ್ತಿ ನೀಡಿ ಗೌರವಿಸುವ ಸತ್‌ಸಂಪ್ರದಾಯವನ್ನು ಬೆಳೆಸಿಕೊಂಡು ಬಂದಿದೆ. ಅದರಂತೆ ಈ ವರ್ಷವೂ ಪರಮಪೂಜ್ಯ ಶ್ರೀಶ್ರೀಗಳವರ ೯೩ನೇ ಜನ್ಮ ದಿನಾಚರಣೆಯ ಸಂದರ್ಭದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ನಾಲ್ಕು ಜನ ಮಹನೀಯರನ್ನು ಶ್ರೀಮಠದ ಭಕ್ತಾದಿಗಳು, ಹಳೆಯ ವಿದ್ಯಾರ್ಥಿಗಳು, ಅಭಿಮಾನಿಗಳು ಅತ್ಯಂತ ಸಂತೋಷ-ಸಡಗರದಿಂದ ಬರಮಾಡಿಕೊಂಡು, ಗೌರವಿಸಿತು. ಈ ನಾಲ್ಕು ಜನರಲ್ಲಿ ಶ್ರೀ ಎನ್.ಬಿ. ಮಹಂತಗೌಡ ಅವರೂ ಒಬ್ಬರು. ಅವರ ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ.*

ಮಲೆನಾಡು ಕರ್ನಾಟಕ ನಿಸರ್ಗ ಸಂಪತ್ತಿನ ತವನಿಧಿ. ಕಾಫಿ, ಏಲಕ್ಕಿ, ಮೆಣಸು, ಕಿತ್ತಳೆ ಮತ್ತು ಭತ್ತಗಳ ಭಂಡಾರ. ಮಾನವ ರತ್ನ ಮಾಣಿಕ್ಯಗಳ ಆಗರ. ಐತಿಹಾಸಿಕ ಮಹತ್ವವುಳ್ಳ ಹಾಸನ ಜಿಲ್ಲೆ ಮಲೆಸೀಮೆಯ ವಿಶಿಷ್ಟ ಪ್ರಾದೇಶಿಕ ಲಕ್ಷಣವುಳ್ಳ ಭೂಭಾಗ. ಕರ್ನಾಟಕದ ಬಹುಭಾಗವನ್ನು ತನ್ನ ಜಲಧಾರೆ ಯಿಂದ ತಣಿಸುತ್ತಿರುವ ಹೇಮಾವತಿ ನದಿಯಿಂದ ನಳನಳಿಸುತ್ತ ನಗುತ್ತಿರುವ ಕೃಷಿಕರ ಪ್ರೀತಿಯನಾಡು. ಹೇಮಾವತಿಯ ಎಡದಂಡೆಯಲ್ಲಿ ಒಂದು ಪುಣ್ಯಗ್ರಾಮ. ಅದುವೇ ನಾರ್ವೆ. ಐತಿಹಾಸಿಕ ಪ್ರಸಿದ್ಧಿ ಗಳಿಸಿದ ವೀರ ಶೂರರ, ದಾನಧರ್ಮಗಳಿಗೆ ಹೆಸರಾದ ಬೀಡು. ಅಲ್ಲಿನ ನಾಡು ಪಟೇಲ್ ಮನೆತನ ಮಾನವೀಯ ಸೇವೆಗೆ ಮತ್ತೊಂದು ರತ್ನದೀಪ. ಮನೆತನದ ಮೂಲಪುರುಷ ವೀರಾಗ್ರಣಿ ಚನ್ನೇಗೌಡ, ಯುದ್ಧವೀರ. ತಾಯಿ ಚಾಮುಂಡೇಶ್ವರಿಗೆ ಅನನ್ಯ ಕಾಣಿಕೆಯನ್ನರ್ಪಿಸಿದ ಪರಾಕ್ರಮಿ.

ಚನ್ನೇಗೌಡರ ವಂಶದಲ್ಲರಳಿದ ನಾಡು ಪಟೇಲ್ ಶ್ರೀ ಎನ್.ಬಿ. ಮಹಂತಗೌಡರ ತಂದೆ ಲಿಂಗೈಕ್ಯ ಬಸವೇಗೌಡರು. ದೈವಭಕ್ತರು, ಧರ್ಮಬೀರುಗಳು, ಜನಾನುರಾಗಿಗಳು. ಅವರಿಗೆ ಬಸಮ್ಮ ಹೆಗ್ಗಡಿತಿ ಮತ್ತು ಚನ್ನಮ್ಮನವರು ಧರ್ಮಪತ್ನಿಯರು. ಶ್ರೀ ಮಹಂತಗೌಡರು ಬಸಮ್ಮನವರು ಹೆತ್ತುಮಗುವಾದರೆ ಚನ್ನಮ್ಮನವರಿಗೆ ಹೊತ್ತ ಮಗುವಾದರು ಮತ್ತು ಮುದ್ದಾದರು. ಅಂತೆಯೇ .ಅವರ ಅಣ್ಣ ಚನ್ನಪ್ಪಗೌಡರ ಮತ್ತು ಸೋಮಮ್ಮನವರಿಗೂ ಚನ್ನಮ್ಮನವರೇ ತಾಯಿ ಪ್ರೀತಿಯುಣಿಸಿ ಬೆಳೆಸಿದರು. ತಂದೆ ಬಸವೇಗೌಡರು ೨೬.೬.೧೯೨೮ರಲ್ಲಿ ಲಿಂಗೈಕ್ಯರಾದಾಗ ಶ್ರೀ ಮಹಂತಗೌಡರಿಗೆ ಹದಿನಾಲ್ಕು ವರ್ಷ. ಶ್ರೀಯುತರು ಓದಿದ್ದು ಕಡಿಮೆ. ಅದಕ್ಕೆ ಕಾರಣ ಮನೆತನದ ಅಂದಿನ ಪರಿಸ್ಥಿತಿ. ಪ್ರಾಥಮಿಕ ವಿದ್ಯಾಭ್ಯಾಸ ಬಾಳ್ಳುವಿನಲ್ಲಾಯಿತು. ನಂತರ ನಾರ್ವೆಯಲ್ಲಿ ಮುಂದುವರಿಯಿತು. ಸಕಲೇಶಪುರದಲ್ಲಿ ಐದು ವರ್ಷ ವ್ಯಾಸಂಗ ಮುಗಿಸಿ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಉನ್ನತ ದರ್ಜೆಯಲ್ಲಿ ಉತ್ತೀರ್ಣರಾದರು. ಮುಂದೆ ಓದುವ ಆಸೆಯಿತ್ತು. ಆದರೆ ತಂದೆ ಬಸವೇಗೌಡರ ಆದೇಶ **ನಿನ್ನ ಓದು ಸಾಕು** ಎಂಬ ಮಾತು ಅಭ್ಯಾಸಕ್ಕೆ ಪೂರ್ಣ ವಿರಾಮ ವಿಟ್ಟಿತು.

ತಂದೆಯ ಕಾಲಾನಂತರ ಮನೆತನದ ಜವಾಬ್ದಾರಿಗೆ ಹೆಗಲುಕೊಟ್ಟರು. ಕಷ್ಟ ಕಾರ್ಪಣ್ಯಗಳನ್ನು ಎದುರಿಸಿದರು. ಸಂಸಾರವೆಂದರೆ ಸಿಹಿ ನೀರಿನ ಸಾಗರವಲ್ಲವೆಂದರಿತರು. ಲೋಕಜ್ಞಾನ ಗಳಿಸಿದರು. ಹತ್ತು ವರ್ಷ ಕಷ್ಟಕರವಾದ ಬದುಕಿನ ದಾರಿ, ದಾರಿಯುದ್ದಕ್ಕೂ ಮುಳ್ಳಿನ ಹಾಸಿಗೆ ತುಳಿದರು. ಹಿರಿಯರು ಮಾಡಿದ ಸಾಲದ ಹೊರೆಯನ್ನು ಕಡಿಮೆ ಮಾಡಿಕೊಳ್ಳಲು ಮಣ್ಣಿನ

ಮಗನಾಗಿ ದುಡಿದರು. ಕೃಷಿಕೃತ್ಯ ಕಾಯಕ ಪವಿತ್ರವೆಂದು ಭಾವಿಸಿದರು. ದುಡಿಮೆಯಲ್ಲಾ ಸಾಲಕ್ಕೆ ಬಡ್ಡಿ ನೀಡುವುದರಲ್ಲಿಯೇ ವ್ಯಯವಾಗುತ್ತಿತ್ತು. ಅದಕ್ಕಾಗಿ ಹಿರಿಯರ ಆಸ್ತಿ ಮಾರಬೇಕಾಗಿ ಬಂತು. ಎದೆಗುಂದಲಿಲ್ಲ. ಇನ್ನು ಮುಂದೆ ನೇಗಿಲು, ಗುದ್ದಲಿ, ಮಂಕರಿಗಳೇ ನಮಗೆ ದೇವರು ಎಂದು ತಮ್ಮನಾದ ಚನ್ನಪ್ಪಗೌಡ ರೊಂದಿಗೆ ಸಮಾಲೋಚಿಸಿ ಮಣ್ಣಿನೊಂದಿಗೇ ಮಾತಾಡುತ್ತಾ ಬಂದರು. ಕೃಷಿ ದೇವದತ್ತ ಕಾಯಕವೆಂದು ನಂಬಿ ನಡೆದರು. ನೀನೊಲಿದರೆ ಕೊರಡು ಕೊನರುವುದೆಂಬಂತೆ ಸತ್ಯ ಶುದ್ಧ ಕಾಯಕದಲ್ಲಿ ದುಡಿದರು. ಕರುಣಾಳು ದೇವರು ಕಣ್ತೆರೆದ. ಶ್ರೀ ಗೌಡರು ಸಾಕಷ್ಟು ಕಾಫಿ ತೋಟ, ತರಿಭೂಮಿ, ಖುಷ್ಕಿ ಜಮೀನುಗಳನ್ನು ಸಂಪಾದಿಸುತ್ತ ಬೆಳೆದರು. ಕರ್ಮಯೋಗಿಯಾಗಿ, ಧರ್ಮಭಾಗಿಗಳಾಗಿ ಅರಳಿದರು. ಸಂಸಾರವನ್ನು ಶಿವಯೋಗ ಸೋಪಾನವೆಂದು ಶರಣರು ಗೌರವಿಸಿದ್ದಾರೆ. ಅದನ್ನು ಪರಿಭಾವಿಸಿದ ಶ್ರೀ ಮಹಂತಗೌಡರು ಗೃಹಸ್ಥಾಶ್ರಮಕ್ಕೆ ಕಾಲಿಟ್ಟರು. ೧೯೩೮ರಲ್ಲಿ ಹೆನ್ನಲಿ ಗ್ರಾಮದ ಶ್ರೀ ನಂಜಪ್ಪಗೌಡ ಮತ್ತು ಶ್ರೀ ಹೆಚ್.ಸಿ. ಪುಟ್ಟಸ್ವಾಮಿಯವರ ಅಕ್ಕ ರುದ್ರಾಣಿಯವರೊಂದಿಗೆ ವಿವಾಹವಾದರು. ಅವರು ಹೆರಿಗೆ ಸಂದರ್ಭದಲ್ಲಿ ಲಿಂಗೈಕ್ಯರಾದರು. ಗೃಹದೀಪ ಆರಿತು. ಆಘಾತ ತಂದಿತು. ಶ್ರೀ ಗೌಡರಿಗೆ ಕಣ್ಣು ಕತ್ತಲಿಟ್ಟಿತು. ಹಿರಿಯ ಬಂಧುಗಳ ಸಲಹೆಯಂತೆ ಮರು ಮದುಮಗನಾದರು. ೧೯೪೧ರಲ್ಲಿ ಚಿಕ್ಕಮಗಳೂರು ಜಿಲ್ಲೆ ಆಲದೂರು ನಾಡು ಪಟೇಲರಾದ ಶ್ರೀ ದ್ಯಾವಪ್ಪಗೌಡರ ಮಗಳು ಶ್ರೀಮತಿ ಪಾರ್ವತಿಯವರೊಂದಿಗೆ ಲಗ್ನ ಸಂಘಟಿಸಿತು. ಅಲ್ಪಾವಧಿಯಲ್ಲಿಯೇ ಶ್ರೀಮತಿ ಪಾರ್ವತಿಯವರೂ ಪರಮೇಶ್ವರ ಪಾದದೊಳೊಂದಾದರು. ಶ್ರೀ ಮಹಂತಗೌಡರು ದಿಗ್ಭ್ರಾಂತರಾದರು. ಮನೆತನ ನಿಲ್ಲಬಾರದೆಂಬ ಕಾರಣಕ್ಕಾಗಿ ಮೂರನೆಯ ಮದುವೆಗೆ ಮನಸ್ಸು ಮಾಡಿದರು. ಆ ಫಲವಾಗಿ ಉದೇವಾರದ ದೊಡ್ಡಮನೆ ಅಣ್ಣೇಗೌಡರ ಮಗಳು ಶ್ರೀಮತಿ ರುದ್ರಾಣಿಯವರೊಂದಿಗೆ ೧೯೪೩ರಲ್ಲಿ ವಿವಾಹವಾದರು. ಶ್ರೀಮತಿ ರುದ್ರಾಣಿಯವರು ಶ್ರೀಗೌಡರ ಬಾಳನ್ನು ಬೆಳಗಿಸಿದರು. ಶ್ರೀಯುತರೇ ಹೇಳುವಂತೆ ರುದ್ರಾಣಿ ನನ್ನ ಬಾಳ ಬೆಳಕು, ಮಹಾಸಾಧ್ವಿ, ಪಾಪಕ್ಕೆ ಹೆಂಡತಿಯಾಗಿ ಪುಣ್ಯಕ್ಕೆ ತಾಯಿಯಾಗಿ ನನ್ನನ್ನು ಮನುಷ್ಯನನ್ನಾಗಿ ಮಾಡಿದ ಶಿಲ್ಪಿ, ನನ್ನ ಕಷ್ಟ ಸುಖಗಳಿಗೆ ಹೆಗಲಿಗೆ ಹೆಗಲು ಕೊಟ್ಟವಳು. ನನ್ನ ಯಶಸ್ಸಿನ ಹಿಂದೆ ರುದ್ರಾಣಿಯವರ ತ್ಯಾಗ, ದುಡಿಮೆ ಅಪಾರ ಎಂಬ ಸಾರ್ಥಕ ನುಡಿಗಳು ದಾಂಪತ್ಯದಲ್ಲಿ ಗೃಹಲಕ್ಷ್ಮಿಯ ಸ್ಥಾನಮಾನಗಳಿಗೆ ಉದಾಹರಣೆಯಾಗಿವೆ. ಈ ದಾಂಪತ್ಯದ ಬಳ್ಳಿಯಲ್ಲಿ ಕಣ್ತೆರೆದ ಸಂತಾನ ಶ್ರೀಗಳು ಶ್ರೀ ಶಿವಪ್ರಸಾದ್, ಶ್ರೀ ರಾಜಶೇಖರ್, ಶ್ರೀ ಜಗದೀಶ್ ಮತ್ತು ಶ್ರೀಮತಿ ಭಾರತಿಯವರು.

ಮನಗೆದ್ದು ಮಾರುಗೆದ್ದವರು ಶ್ರೀ ಮಹಂತಗೌಡರು. ಕುಟುಂಬವನ್ನು, ಮನೆತನವನ್ನು ಸಮೃದ್ಧವಾಗಿ ಕಟ್ಟಿದಂತೆಯೇ ಹುಟ್ಟಿದೂರನ್ನು ಎತ್ತರಕ್ಕೆ ಬೆಳೆಸಿದವರು. ನಾರ್ವೆಯ ನವನಿರ್ಮಾಣದ ಶಿಲ್ಪಿ ಎನಿಸಿದರು. ದಾರಿ, ಬೆಳಕು, ಆರೋಗ್ಯ, ಶಿಕ್ಷಣ ಕ್ಷೇತ್ರಗಳಿಂದ ವಂಚಿತರಾಗಿದ್ದ ಕಾಡಿನ ಮಧ್ಯದಲ್ಲಿ ಬಾಹ್ಯ ಜಗತ್ತಿಗೆ ಮರೆಯಾಗಿದ್ದ ಪುಟ್ಟಗ್ರಾಮವನ್ನು ನಾಗರಿಕ ಪ್ರಪಂಚದ ಪುಣ್ಯ ಗ್ರಾಮವನ್ನಾಗಿ ಪರಿವರ್ತಿಸಿದ ಪುಣ್ಯಜೀವಿಗಳು ಶ್ರೀ ಗೌಡರು. ಗ್ರಾಮ ಪಂಚಾಯತಿ ಛೇರ್ಮನ್‌ರಾಗಿ ಸೇವೆ ಸಲ್ಲಿಸಿದರು. ಹಳ್ಳಿಗೆ ಬೆಳಕಿನ ಬಾಗಿನ ಕೊಟ್ಟರು. ಬಡತನದ ಹಳ್ಳಿಗೆ ಬಟ್ಟೆದೋರಿದರು. ದೂರವಾಣಿಯಿಂದ ಮಾತನಾಡುವಂತೆ ಹತ್ತಿರಗೊಳಿಸಿದರು. ಆಸ್ಪತ್ರೆ ಬಾಗಿಲು ತೆರೆದರು. ಅಂಚೆ ಕಛೇರಿ ತಂದರು. ನಾಗರಿಕ ಸೌಲಭ್ಯವನ್ನೆಲ್ಲಾ ನಾರ್ವೆಗೆ ಅಲಂಕರಿಸಿದರು.

ಕೃಷಿ ಜೀವನಾಧಾರ, ಪವಿತ್ರ ಕಾಯಕವೆಂದರಿತು ತಮ್ಮ ಉದ್ಧಾರ ದೊಡ್ಡದಲ್ಲ, ಊರಿನ ಉದ್ಧಾರ, ರೈತರ ಅಭಿವೃದ್ಧಿ ದೊಡ್ಡದು ಎಂದು ಎಲ್ಲ ಸಮಾಜದ ರೈತ ಬಂಧುಗಳ ಏಳಿಗೆಗೆ ಕಾರಣರಾದರು. ಊರಿಂದ ಪರಸ್ಥಳಗಳಿಗೆ ಸಂಚಾರ ಸೌಲಭ್ಯಕ್ಕಾಗಿ ಸೇತುವೆ ಕಟ್ಟಿಸಲು ಶ್ರಮಿಸಿದರು. ಅಬ್ಬಿಹಳ್ಳಕ್ಕೆ ಆಣೆಕಟ್ಟು ಕಟ್ಟಿಸಿ ಕೃಷಿಗೆ ನೀರು ಹರಿಯಲು ಅನುಕೂಲ ಕಲ್ಪಿಸಿದರು. ಈ ಸೇವಾ ಕಾರ್ಯಕ್ಕಾಗಿ ಇಂಜಿನಿಯರ್ ಶ್ರೀ ಎಂ.ಬಿ. ನಟರಾಜ್, ಕಂಟ್ರಾಕ್ಟರ್ ಶ್ರೀ ಮರಿಶಾಮಪ್ಪ, ದಿವಾನರಾಗಿದ್ದ ಸರ್.ಎಂ. ಇಸ್ಮಾಯಿಲ್‌ರಂಥ ಪ್ರಮುಖರ ನೆರವು ಪಡೆಯುವಲ್ಲಿ ಯಶಸ್ವಿಯಾದರು. ಕೆರೆಗಳ ಹೂಳೆತ್ತಿಸಿದರು. ಕೃಷಿ ಸುಧಾರಣೆಗಾಗಿ ಆಧುನಿಕ ವೈಜ್ಞಾನಿಕ ಮಾರ್ಗೋಪಾಯಗಳನ್ನು ರೈತರಿಗೆ ಒದಗಿಸಿದರು.

ದೆಹಲಿಯಲ್ಲಿ ನಡೆದ ವಿಶ್ವ ವ್ಯವಸಾಯ ಸಮ್ಮೇಳನದಲ್ಲಿ ಪ್ರತಿನಿಧಿಯಾಗಿ ಭಾಗವಹಿಸಿ ನಾರ್ವೆಗೆ ಹೆಮ್ಮೆ ತಂದರು. ಸಮ್ಮೇಳನದಲ್ಲಿ ಕೃಷಿಗೆ ಬೇಕಾದ ಹೊಸ ಆವಿಷ್ಕಾರಗಳನ್ನೆಲ್ಲ ಗಮನಿಸಿದರು. ಟಿಪ್ಪಣಿ ಮಾಡಿಕೊಂಡು ಬಂದು ಪ್ರಯೋಗಗೊಳಿಸಿದರು. ಪಂಡಿತ್ ಜವಾಹರಲಾಲ್ ನೆಹರು, ಶ್ರೀಮತಿ ಇಂದಿರಾಗಾಂಧಿ, ಡಾ. ರಾಜೇಂದ್ರಪ್ರಸಾದ್‌ರಂಥ ರಾಷ್ಟ್ರನಾಯಕರನ್ನು ದರ್ಶನ ಮಾಡಿದರು. ರಾಷ್ಟ್ರದ ಪ್ರಮುಖ ಕೇಂದ್ರಗಳಾದ ಪೂನಾ, ಮುಂಬಯಿ, ಝಾನ್ಸಿ, ಆಗ್ರಾ, ಚೆನ್ನೈ, ಕಲ್ಕತ್ತ, ವಿಶಾಖಪಟ್ಟಣಗಳನ್ನು ಭೇಟಿ ಮಾಡಿದರು. ಪ್ರವಾಸಾನುಭವ





ಶ್ರೀ ಮಹಂತಗೌಡರನ್ನು ಮಹತ್ತಾಗಿ ಮಾರ್ಪಡಿಸಿತು. ಪ್ರಗತಿಪರ ರೈತರನ್ನಾಗಿ ರೂಪಿಸಿತು. ಬೇಲೂರು ತಾಲ್ಲೂಕಿನ ಪ್ರಗತಿಪರರೈತ ಪ್ರಶಸ್ತಿ ಪುರಸ್ಕೃತರಾದರು.

ಶ್ರೀಯುತರು ಶಿಕ್ಷಣಾಭಿಮಾನಿಗಳು, ಅಕ್ಷರ ಸಂಸ್ಕೃತಿಗೆ ಎಣ್ಣೆಬತ್ತಿಯನ್ನು ಒದಗಿಸಿದ ಉದಾರಿಗಳು. ನಾರ್ವೆಯಲ್ಲಿ ಪ್ರಾಥಮಿಕ, ಪ್ರೌಢಶಾಲೆಗಳ ಸ್ಥಾಪನೆಗೆ ಶ್ರಮಿಸಿದ ಸಂಪನ್ನರು. ಕಟ್ಟಡ ಕಟ್ಟಿಸಿಕೊಟ್ಟ ಪುಣ್ಯಾತ್ಮರು. ವಿನೋಬಾ ಭಾವೆಯವರ ಭೂದಾನ ಚಳುವಳಿಯನ್ನು ಪ್ರೀತಿಸಿ ಸಹಕರಿಸಿದ, ಭೂದಾನ ನೀಡಿದ ದಾನವಿನಮ್ರರು. ಇಂಥ ಸಮಾಜ ಕಲ್ಯಾಣ ಸದ್ಗುಣಿಗಳನ್ನು ಮೈಸೂರಿನ ದಸರಾ ಉತ್ಸವದಲ್ಲಿ ಅರಮನೆಯಲ್ಲಿ ಸತ್ಕಾರ ಸಮಾರಂಭವನ್ನೇರ್ಪಡಿಸಿ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅರರು ದರ್ಬಾರ್ ಸಭಾಂಗಣದಲ್ಲಿ ಚಿನ್ನದ ರಾಜಮುದ್ರೆಯುಳ್ಳ ಬೆಳ್ಳಿಯ ಹರಿವಾಣವನ್ನು ನೀಡಿ ಅಭಿನಂದಿಸಿದ್ದು ಮಲೆನಾಡಿಗೆ, ನಾರ್ವೆಗೆ, ಸಮಾಜಕ್ಕೆ ಕಲಶ ಮುಡಿಸಿದಂತಾದದ್ದು ಸ್ಮರಣೀಯ. ಮಹಂತ ಹುಟ್ಟಿ ಮನೆತನ ಸಾರ್ಥಕವಾಯಿತು ಎಂದು ಅಣ್ಣ ವೀರಣ್ಣಗೌಡರು ಮೆಚ್ಚಿ ನುಡಿಯುವಂತಾಯಿತು. ಧನ್ಯ ಶ್ರೀ ಮಹಂತಗೌಡರ ಜೀವನ.

ದಾಸೋಹ ಮೌಲ್ಯಾರಾಧಕರಾದ ಶ್ರೀಯುತರು ತಮ್ಮ ಮನೆಯಲ್ಲಿ ಅನೇಕ ವರ್ಷಗಳ ಕಾಲ ವಿದ್ಯಾರ್ಥಿಗಳಿಗೆ ಅನ್ನದಾಸೋಹ ನಡೆಸಿದ ಶರಣರು. ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನಕೊಡಲು ಕಾರಣರಾದರು. ಕಲಾ ಸೇವೆಗಾಗಿ ಸಭಾಂಗಣ ನಿರ್ಮಾಣ ಮಾಡಿಸಿದರು. ಪ್ರವಾಸ ಪ್ರಿಯರಾದ ಶ್ರೀ ಗೌಡರು ಅಖಿಲ ಭಾರತ ಪ್ರವಾಸ ಮಾಡಿದರು. ಭಾರತ ಸೇವಾದಳದಲ್ಲಿ ದುಡಿದರು. ಪದ್ಮಭೂಷಣ ಡಾ. ಎಂ.ಸಿ. ಮೋದಿಯವರ ನೇತ್ರ ಯಜ್ಞದಲ್ಲಿ ಸಹಕರಿಸಿ, ತಮ್ಮ ಮನೆಗೆ ಆಹ್ವಾನಿಸಿ, ಆತಿಥ್ಯ ನೀಡಿ ಎಂತಹ ಭವ್ಯತೆಯುಳ್ಳ ಮಹಾಮನೆ ಕುಸರಿಯ ಕಾಷ್ಟಕಲೆಯ ಬೆಡಗು ಎಂದು ಡಾ. ಮೋದಿಯವರು ಮೆಚ್ಚುಗೆಯ ಉದ್ಗಾರದ ನುಡಿಗಳಿಗೆ ಇಂಬುಕೊಟ್ಟರು. ಹರಿಜನರಿಗೆ ತಮ್ಮ ಬಂಧುಗಳ ಸಹಕಾರದಿಂದ ಮನೆ ಕಟ್ಟಿಸಿಕೊಟ್ಟ ದಯಾಳುಗಳು ಶ್ರೀ ಮಹಂತಗೌಡರು. ರಾಜಕಾರಣಿಯಾಗಿ, ಗ್ರಾಮಪಂಚಾಯಿತಿ, ತಾಲ್ಲೂಕು ಅಭಿವೃದ್ಧಿ ಮಂಡಳಗಳ ಸದಸ್ಯರಾಗಿ ಸೇವೆ ಸಲ್ಲಿಸಿದರು. ಆ ಸಂದರ್ಭದಲ್ಲಿ ರಾಜಕೀಯ ಮುತ್ಸದ್ದಿಗಳಾದ ರಾಷ್ಟ್ರನಾಯಕ ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಟಿ. ಭಾಷ್ಯಂ, ಶ್ರೀ ಹೆಚ್.ಸಿ. ದಾಸಪ್ಪ, ಶ್ರೀ ಟಿ. ಸುಬ್ರಹ್ಮಣ್ಯಂ, ಶ್ರೀ ಎ.ಜಿ. ರಾಮಚಂದ್ರ ರಾಯರು, ಶ್ರೀ ವೈ. ಧರ್ಮಪ್ಪ, ಶ್ರೀ ಕೆ.ಎಂ. ರುದ್ರಪ್ಪನವರಂಥ ಜನನಾಯಕರ ಪ್ರೀತಿ ಗೌರವಗಳನ್ನು ಗಳಿಸಿಕೊಂಡರು. ಸಮಾಜಕ್ಕೆ ವಿವಿಧ ಮುಖ ಸೇವೆ ಸಲ್ಲಿಸಿದ ತೃಪ್ತಿ ಶ್ರೀ ಗೌಡರದಾಗಿದೆ. ಶ್ರೀ ಗೌಡರ ಮನೆಯೊಂದು ಅತಿಥಿ ಸತ್ಕಾರದ ಶಿವಸದನ, ಮಾನವೀಯತೆಯ ಮಹಾಮನೆ.

**ಅಸಮಾನ್ಯ, ಹೆತ್ತವರ ಮುಡಿಮಲ್ಲಿಗೆ, ವಿರಳರಲ್ಲಿ ವಿರಳರು, ಸಹೃದಯಿ ಸಮಾಜ ಬಾಂಧವ, ಅನುಪಮ ವ್ಯಕ್ತಿತ್ವದ ಹಿರಿಯ ಚೇತನ ಸಾಹಿತ್ಯಾಸಕ್ತನಾಡಗೌಡರು, ದೇಶಪ್ರೇಮಿ, ಸಸ್ನೇಹಿ, ಸಾರ್ಥಕ ಜೀವಿ. ಸಾಧನೆಗಳ ಸರದಾರ, ನಡೆ ನುಡಿಯ ನಂದಾದೀಪ, ಪರಿಶ್ರಮದ ಜೀವಿ, ಗಂಧದ ನಾಡಿಗೆ ಗೌರವ ತಂದವರು, ದೊಡ್ಡ ಸಾಧನೆಯ ಸರಳ ವ್ಯಕ್ತಿತ್ವ, ಕಾಯಕ ನಿಷ್ಠ, ವಸುದೈವ ಕುಟುಂಬಿಕ, ಇವನಮ್ಮವ, ಸಮಾಜದ ಆದರ್ಶ ವ್ಯಕ್ತಿ** ಮುಂತಾಗಿ ನಾಡು ಶ್ರೀ ಮಹಂತಗೌಡರನ್ನು ಕಂಡು ಗೌರವಿಸಿದೆ. ೧೯೮೮ರಲ್ಲಿ **ನಾರ್ವೆ ನಾಡು ಪಟೇಲ್ ಮಹಾನುಭಾವ ಮಹಂತಗೌಡರು** ಎಂದು ಅಭಿನಂದನ ಗ್ರಂಥವನ್ನು ಶ್ರೀ ಚಂದ್ರಶೇಖರ್ ಧೂಳೇಕರ್ ಅವರ ಸಂಪಾದಕತ್ವದಲ್ಲಿ ಹಾಸನದ ಮಾಜಿ ಶಾಸಕರಾದ ನ್ಯಾಯವಾದಿ ಶ್ರೀ ಕೆ.ಎಂ. ರುದ್ರಪ್ಪನವರ ಮಾರ್ಗದರ್ಶನದಲ್ಲಿ ಹೊರತಂದು, ಶ್ರೀ ಗೌಡರಿಗೆ ಅರ್ಪಿಸಿ ಸಂತೋಷ ಸಂತೃಪ್ತಿ ಹೊಂದಿದೆ. ಇದಲ್ಲದೆ ಅನೇಕ ಸಂಘ-ಸಂಸ್ಥೆಗಳು ಅವರನ್ನು ಸನ್ಮಾನಿಸಿವೆ, ಪ್ರಶಸ್ತಿ ನೀಡಿವೆ ಎಂಬುದಿಲ್ಲಿ ಗಮನೀಯ.

ಈ ಎಲ್ಲ ಕೀರ್ತಿ ಪುರಸ್ಕಾರಗಳಿಗೆ ಪಾತ್ರರಾಗಿರುವ ಶ್ರೀ ಎನ್.ಬಿ. ಮಹಂತಗೌಡರಿಗೆ ಶ್ರೀ ಸಿದ್ಧಗಂಗಾ ಮಠವೆಂದರೆ ಭಕ್ತಿ ಮೈದುಂಬಿ ಬರುತ್ತದೆ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು ಅವರಿಗೆ ಪ್ರತ್ಯಕ್ಷ ಪರಮಾತ್ಮ ನಡೆದಾಡುವ ದೇಗುಲ, ನುಡಿದು ಆಶೀರ್ವದಿಸುವದೇವರು. ಗುರು ಲಿಂಗ ಜಂಗಮ ಪ್ರೇಮಿಗಳಾದ ಶ್ರೀಯುತರು ನಾಡಿನ ಮಠ ಮಾನ್ಯಗಳ ಬಗ್ಗೆ ಶ್ರದ್ಧಾ ಭಕ್ತಿಯುಳ್ಳವರು. ಶ್ರೀಮಠದೊಡನೆ ಭಕ್ತಿ ಬಾಂಧವ್ಯವನ್ನು ಬೆಳೆಸಿಕೊಂಡು ಬಂದಿರುವ ಸಜ್ಜನ ಸುಮನ ಶ್ರೀ ಮಹಂತಗೌಡರು.

ಸದಾ ಮುಗಿದ ಕೈ, ಬಾಗಿದ ತಲೆ, ಮೇಲೆ ಜರಿಯ ಗೋಪುರ, ಮುಚ್ಚುಕೋಟು, ಹಣೆಯ ವಿಭೂತಿ ವೈಭವ, ತುಂಬು ಮೀಸೆಯ ಸಂಭಾವಿತ ರೂಪು ಹಳಿತು ಹೊಸತುಗಳ ಸಿರಿಸೌಜನ್ಯ ಶೀಲ ಶ್ರೀ ಎನ್.ಬಿ. ಮಹಂತಗೌಡರನ್ನು ಗೌರವಿಸುದೆಂದರೆ ಅದೊಂದು ಭೂಭಾಗವನ್ನು, ಸಂಸ್ಕೃತಿಯನ್ನು, ಕಾಫಿ ಏಲಕ್ಕಿಗಳ ಜೀವನವನ್ನೇ ಗೌರವಿಸಿದಂತೆ ಎಂದು ಭಾವಿಸಿ, ಮಲೆನಾಡಿನ ಮಾಣಿಕ್ಯವೆಂದು ಸನ್ಮಾನಿಸಿದೆ.

□

## ಬೆಂಗಳೂರು ನಗರದಲ್ಲಿ

# ಹಳೆ ವಿದ್ಯಾರ್ಥಿಗಳ ಸಂಘ ಶಾಖೆಯ ಸಮಾಲೋಚನಾ ಸಭೆ




ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿಗಳು ಹಾಗೂ ಬಂದೀಖಾನೆಯ ಮಹಾನಿರ್ದೇಶಕರಾದ ಶ್ರೀ ಎಲ್. ರೇವಣಸಿದ್ದಯ್ಯ ಅವರು ಮಾತನಾಡುತ್ತಿರುವುದು. ಚಿತ್ರದಲ್ಲಿ : ಶ್ರೀ ಟಿ.ಬಿ. ವಿರೂಪಾಕ್ಷಯ್ಯ, ಚಕ್ರಭಾವಿ ಮಠದ ಶ್ರೀಗಳು, ಶ್ರೀಕ್ಷೇತ್ರದ ಆಡಳಿತಾಧಿಕಾರಿ ಶ್ರೀ ಪಿ.ಎಸ್. ಪುಟ್ಟಶಂಕರಯ್ಯ, ಹಳೆ ವಿದ್ಯಾರ್ಥಿ ಸಂಘದ ಪ್ರಧಾನ ಕಾರ್ಯದರ್ಶಿ ಡಾ. ಎಂ.ಎನ್. ಚನ್ನಬಸಪ್ಪ, ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀಶ್ರೀ ಸಿದ್ದಲಿಂಗ ಸ್ವಾಮಿಗಳು, ಶ್ರೀ ಬಿ.ಎನ್. ಚನ್ನಪ್ಪ, ದೊಡ್ಡಮಠದ ಶ್ರೀಗಳು, ಬೆಂಗಳೂರು ವೀರಶೈವ ಸಹಕಾರ ಬ್ಯಾಂಕಿನ ಅಧ್ಯಕ್ಷರಾದ ಶ್ರೀ ಬಿ.ಎಸ್. ಪರಮಶಿವಯ್ಯ ಅವರನ್ನು ಕಾಣಬಹುದು.

ಆಗಸ್ಟ್ ೬ರಂದು ಬೆಂಗಳೂರಿನ ಶಿವನಹಳ್ಳಿಯಲ್ಲಿರುವ ಜಂಗಮ ಮಠದಲ್ಲಿ ಬೆಂಗಳೂರು ನಗರದಲ್ಲಿ ಹಳೆ ವಿದ್ಯಾರ್ಥಿಗಳ ಸಮಾಲೋಚನಾ ಸಭೆ. ಶ್ರೀ ಸಿದ್ಧಗಂಗಾ ಕ್ಷೇತ್ರದ ಕಿರಿಯ ಶ್ರೀಶ್ರೀಗಳಾದ ಪರಮಪೂಜ್ಯ ಶ್ರೀಶ್ರೀ ಸಿದ್ಧಲಿಂಗ ಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು. ದೊಡ್ಡಮಠ ಹಾಗೂ ಚಕ್ರಭಾವಿ ಮಠದ ಶ್ರೀಶ್ರೀಗಳವರ ಉಪಸ್ಥಿತಿ ಹಾಗೂ ಹಳೆ ವಿದ್ಯಾರ್ಥಿ ಸಂಘದ ಪ್ರಧಾನ ಕಾರ್ಯದರ್ಶಿಗಳು, ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಪ್ರಾಂಶುಪಾಲರೂ ಆದ ಡಾ. ಎಂ.ಎನ್. ಚನ್ನಬಸಪ್ಪ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ವೇದಿಕೆಯಲ್ಲಿ ಬಂದೀಖಾನೆಯ ಮಹಾ ನಿರ್ದೇಶಕರೂ, ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿಗಳೂ ಆದ ಶ್ರೀ ಎಲ್. ರೇವಣಸಿದ್ಧಯ್ಯ, ನಿವೃತ್ತ ಮುಖ್ಯ ಇಂಜಿನಿಯರ್ ಶ್ರೀ ಬಿ.ಎನ್. ಚನ್ನಪ್ಪ ಶ್ರೀಮಠದ ಆಡಳಿತಾಧಿಕಾರಿ ಶ್ರೀ ಪಿ.ಎಸ್. ಪುಟ್ಟಶಂಕರಯ್ಯ ಹಾಗೂ ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ನಿಧಿಯ ಅಧ್ಯಕ್ಷರು ಹಾಗೂ ಬೆಂಗಳೂರು ವೀರಶೈವ ಸಹಕಾರಿ ಬ್ಯಾಂಕಿನ ಅಧ್ಯಕ್ಷರಾದ ಶ್ರೀ ಬಿ.ಎಸ್. ಪರಮಶಿವಯ್ಯ ಅವರು ಉಪಸ್ಥಿತರಿದ್ದರು.

ಅಂದಿನ ಸಭೆಯ ರೂವಾರಿ ಶ್ರೀ ಟಿ.ಎಂ. ವಿರೂಪಾಕ್ಷಯ್ಯ ಅವರು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ಹಳೆ ವಿದ್ಯಾರ್ಥಿ ಸಂಘದ ಬೆಂಗಳೂರು ಶಾಖೆಯು ನಡೆದುಬಂದ ದಾರಿಯನ್ನು ಪರಿಚಯ ಮಾಡಿ ಕೊಡುತ್ತಾ, ಕೆಲವು ಅನಿವಾರ್ಯ ಕಾರಣ








ಶ್ರೀ ಟಿ.ಬಿ. ವಿರೂಪಾಕ್ಷಯ್ಯ ಅವರಿಂದ ಪ್ರಾಸ್ತಾವಿಕ ನುಡಿ



ಶ್ರೀ ಬಿ.ಎಸ್. ಪರಮಶಿವಯ್ಯನವರು ಸಲಹೆ ನೀಡುತ್ತಿರುವುದು

ಗಳಿಂದ ಸ್ಥಗಿತ ಗೊಂಡಿದ್ದ ಶಾಖೆಯ ಕಾರ್ಯಚಟುವಟಿಕೆಗಳು ಮತ್ತೆ ಆರಂಭವಾಗುತ್ತಿರುವುದಕ್ಕೆ ಸಂತೋಷವನ್ನು ವ್ಯಕ್ತಪಡಿಸಿದರು.

ಮೈಸೂರು ನಗರದಲ್ಲಿ ಇತ್ತೀಚೆಗೆ ಆರಂಭವಾದ ಹಳೆ ವಿದ್ಯಾರ್ಥಿ ಸಂಘದ ಮೈಸೂರು ಶಾಖೆಯ ಕಾರ್ಯಕಲಾಪಗಳ ಬಗ್ಗೆ ಹಳೆ ವಿದ್ಯಾರ್ಥಿ ಸಂಘದ ಕಾರ್ಯದರ್ಶಿ ಶ್ರೀ ಕೆ.ಎಚ್. ಶಿವರುದ್ರಯ್ಯನವರು ಪರಿಚಯ ಮಾಡಿಕೊಟ್ಟರು.

ಸಭೆಯಲ್ಲಿ ಹಳೆ ವಿದ್ಯಾರ್ಥಿ ಸಂಘದ ಬೆಂಗಳೂರು ಶಾಖೆ ಸಕ್ರಿಯವಾಗಿ, ಕ್ರಿಯಾತ್ಮಕವಾಗಿ ತೊಡಗಿಸಿಕೊಳ್ಳುವಂತೆ ಮಾಡಲು ಮಾನ್ಯಸದಸ್ಯರು ಅಮೂಲ್ಯ ಸಲಹೆಗಳನ್ನು ನೀಡಿದರು. ಸಭೆಯಲ್ಲಿ ಮಾತನಾಡಿದ ಶ್ರೀ ಎಲ್. ರೇವಣಸಿದ್ಧಯ್ಯ, ಶ್ರೀ ಬಿ.ಎಸ್. ಪರಮಶಿವಯ್ಯ, ಶ್ರೀ ಶಿವಾನಂದ ಶರ್ಮಾ, ಶ್ರೀ ಬಿ.ಎಸ್. ಚನ್ನಪ್ಪ, ಶ್ರೀ ಪಿ.ಎಸ್. ಪುಟ್ಟಶಂಕರಯ್ಯ, ಶ್ರೀ ರೇವಣಸಿದ್ಧಯ್ಯ, ಶ್ರೀ ಕೆ.ಎನ್. ಗೋವಿಂದರಾಜು, ಶ್ರೀ ಹೆಚ್.ಬಿ. ಗಂಗಾಧರಯ್ಯ, ಶ್ರೀ ಗಂಗಹನುಮಯ್ಯ ಮೊದಲಾದವರು ಮಾತನಾಡಿ ಸಂಘದ ಸರ್ವತೋಮುಖ ಅಭಿವೃದ್ಧಿಗೆ ಸಂಪೂರ್ಣ ಸಹಕಾರ ನೀಡುವುದಾಗಿ ಆಶ್ವಾಸನೆ ನೀಡಿದರು.

ಅಧ್ಯಕ್ಷತೆ ವಹಿಸಿದ್ದ ಡಾ. ಎಂ.ಎನ್. ಚನ್ನಬಸಪ್ಪನವರು ಮಾತನಾಡಿ "ಮಠ ಎಂದರೆ ಶ್ರೀ ಸಿದ್ಧಗಂಗಾ ಮಠ. ಸ್ವಾಮಿಗಳೆಂದರೆ ಡಾ. ಶ್ರೀಶ್ರೀ ಶಿವಕುಮಾರ ಸ್ವಾಮಿಗಳು" ಎಂದು ಡಾ. ಎಂ.ಸಿ. ಮೋದಿಯವರ ಮಾತನ್ನು ಪುನರುಚ್ಚರಿಸಿ, ಪರಮಪೂಜ್ಯ ಶ್ರೀಶ್ರೀಗಳವರು ಸಮಾಜಕ್ಕೆ ಸಲ್ಲಿಸುತ್ತಿರುವ ಸೇವೆಯನ್ನು ಭಾವುಕರಾಗಿ ಸ್ಮರಿಸಿ, ನಾವು ಅವರು ಮಾಡುತ್ತಿರುವ ಮಹಾಮಣಿಹಕ್ಕೆ ಅಳಿಲು ಸೇವೆಯನ್ನಾದರೂ ಸಲ್ಲಿಸೋಣ' ಎಂದು ಹೇಳಿದರು.

ಸಾನ್ನಿಧ್ಯ ವಹಿಸಿದ್ದ ಶ್ರೀಕ್ಷೇತ್ರದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ತಮ್ಮ ಅನುಗ್ರಹ ಭಾಷಣದಲ್ಲಿ "ಪರಮಪೂಜ್ಯ ಶ್ರೀಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಬಡವರ, ದೀನ-ದಲಿತರ ಒಳಿತಿಗಾಗಿ ಹಗಲಿರುಳು ಶ್ರಮಿಸುತ್ತಿದ್ದಾರೆ. ಮಠದ ಆಸ್ತಿ ಮಠದ ವಿದ್ಯಾರ್ಥಿಗಳು. ಅವರ ಮಾರ್ಗದರ್ಶನದಲ್ಲಿ ನಾವೆಲ್ಲ ಮುನ್ನಡೆಯೋಣ. ಬೆಂಗಳೂರು ಶಾಖೆ ಉತ್ತಮ ಕೆಲಸಗಳನ್ನು ಮಾಡುವಂತಾಗಲಿ" ಎಂದು ಹಾರೈಸಿದರು.

ಇದೇ ಸಂದರ್ಭದಲ್ಲಿ ನೂತನ ಪದಾಧಿಕಾರಿಗಳನ್ನು ಸರ್ವಾನುಮತದಿಂದ ಈ ಕೆಳಕಂಡಂತೆ ಆಯ್ಕೆ ಮಾಡ ಲಾಯಿತು.

### ಕಾರ್ಯಕಾರಿ ಸಮಿತಿಯ ಪದಾಧಿಕಾರಿಗಳು

| | |
|---|---|
| ಅಧ್ಯಕ್ಷರು | ಶ್ರೀ ಎಲ್. ರೇವಣಸಿದ್ಧಯ್ಯ |
| ಕಾರ್ಯಾಧ್ಯಕ್ಷರು | ಶ್ರೀ ಬಿ.ಎನ್. ಚನ್ನಪ್ಪ |
| ಉಪಾಧ್ಯಕ್ಷರು | ಶ್ರೀ ಬಿ.ಎಸ್. ಪರಮಶಿವಯ್ಯ |
| | ಶ್ರೀ ಎಸ್. ಶಿವಾನಂದಶರ್ಮ |
| | ಶ್ರೀ ಎಸ್. ಚನ್ನಬಸವಯ್ಯ |
| | ಶ್ರೀ ಕೆ.ಎನ್. ಗೋವಿಂದರಾಜು |
| ಕಾರ್ಯದರ್ಶಿಗಳು | ಶ್ರೀ ರಂಗಹನುಮಯ್ಯ |
| | ಶ್ರೀ ಎನ್.ಸಿ. ವಿರುಪಾಕ್ಷಯ್ಯ |
| ವ್ಯವಸ್ಥಾಪಕ ಕಾರ್ಯದರ್ಶಿ | ಶ್ರೀ ಜಿ. ವೀರಪ್ಪದೇವರು |
| ಉಪ ಕಾರ್ಯದರ್ಶಿ | ಶ್ರೀ ಜೆ.ಕೆ. ನಂಜುಂಡಯ್ಯ |
| | ಶ್ರೀ ಪಿ. ಪರಮೇಶ್ವರಯ್ಯ |
| | ಶ್ರೀ ಹೆಚ್.ಡಿ. ರೇಣುಕುಮಾರ್ |



ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳು

ಅಧ್ಯಕ್ಷರು
ಸಾಂಸ್ಕೃತಿಕ ಸಮಿತಿ — ಶ್ರೀ ಟಿ.ಆರ್. ಮಹಾದೇವಯ್ಯ
ಖಜಾಂಚಿ — ಶ್ರೀ ಟಿ.ಬಿ. ವಿರೂಪಾಕ್ಷಯ್ಯ

**ಕಾರ್ಯಕಾರಿ ಸಮಿತಿ**

ಸದಸ್ಯರು

| | |
|---|---|
| ರಾಜಾಜಿನಗರ | ಶ್ರೀ ಹೆಚ್.ಎಸ್. ಶಿವಲಿಂಗಯ್ಯ |
| | ಶ್ರೀ ಎಂ. ಶಿವಣ್ಣ |
| | ಶ್ರೀ ಆರ್. ಮುದ್ದರಂಗಯ್ಯ |
| | ಶ್ರೀ ಹೆಚ್.. ಹನುಮಂತರಾಯ |
| | ಶ್ರೀ ಪಿ. ಸಿದ್ದಲಿಂಗಯ್ಯ, ಕೆ.ಇ.ಬಿ. |
| | ಶ್ರೀ ಬಿ. ಬಸಪ್ಪಾಜಿ |
| ವಿಜಯನಗರ | ಶ್ರೀ ಗುರುನಂಜಯ್ಯ |
| | ಶ್ರೀ ಜಿ. ಪರಮೇಶ್ವರಪ್ಪ |
| | ಶ್ರೀ ಹೆಚ್.ಎಸ್. ಸಿದ್ದಲಿಂಗಯ್ಯ |
| | ಶ್ರೀ ಹೆಚ್.ವಿ. ರುದ್ರಯ್ಯ |
| | ಶ್ರೀ ಬಿ. ಶಿವಗಂಗಯ್ಯ |
| | ಶ್ರೀ ನಂಜಪ್ಪ |
| | ಶ್ರೀ ಬಿ.ವಿ. ಮಹಾದೇವಯ್ಯ |
| | ಶ್ರೀ ಕೆ.ಎಲ್. ಸಿದ್ದಲಿಂಗಯ್ಯ |
| | ಶ್ರೀ ಎ. ಪಿನಾಕಪಾಣಿ |
| ಬಸವೇಶ್ವರನಗರ | ಶ್ರೀ ಹೆಚ್.ಸಿ. ಹೊನ್ನಯ್ಯ |
| | ಶ್ರೀ ಎಸ್. ಚನ್ನಬಸವಯ್ಯ |
| | ಶ್ರೀ ರೇವಣಸಿದ್ದಯ್ಯ |
| | ಶ್ರೀ ಬಿ. ಬಸವರಾಜು |
| | ಶ್ರೀ ಹೆಚ್. ಸಿದ್ದಲಿಂಗಪ್ಪ |
| | ಶ್ರೀ ಎಂ. ಮಲ್ಲಿಕಾರ್ಜುನಯ್ಯ |
| | ಶ್ರೀ ಕೆ.ಜಿ. ಗೋವಿಂದಯ್ಯ |
| ಹನುಮಂತನಗರ | ಶ್ರೀ ವಿ. ಶಿವರುದ್ರಯ್ಯ |
| | ಶ್ರೀ ವಿ.ಆರ್. ವೀರಭದ್ರಯ್ಯ |
| | ಶ್ರೀ ವೈ. ತುಳಜಪ್ಪ |
| | ಶ್ರೀ ಜಿ. ಶಿವಣ್ಣ |
| | ಶ್ರೀ ಎ.ಎಲ್. ಲಿಂಗಯ್ಯ |
| ಚಾಮರಾಜಪೇಟೆ | ಶ್ರೀ ಡಿ.ಎಲ್. ಚಂದ್ರಶೇಖರಯ್ಯ |
| | ಶ್ರೀ ಹೆಚ್. ವಿರೂಪಾಕ್ಷಯ್ಯ |
| ಜಯನಗರ | ಶ್ರೀ ಬಿ. ವಿರೂಪಾಕ್ಷ |
| | ಶ್ರೀ ಆರ್. ಮಹಾದೇವಯ್ಯ |
| | ಶ್ರೀ ಎನ್.ಆರ್. ಮಲ್ಲಿಕಾರ್ಜುನಯ್ಯ |
| | ಶ್ರೀ ಬಿ. ಮಹಾದೇವಯ್ಯ |
| | ಶ್ರೀ ಸಿ. ಶಿವಣ್ಣ |
| | ಶ್ರೀ ಎಸ್.ಸಿ. ಬಸವರಾಜು |
| ಚಂದ್ರಾ ಲೇಔಟ್ ಮತ್ತು ನಾಗರಬಾವಿ | ಶ್ರೀ ಎಚ್.ಎಸ್. ಸಿದ್ಧಗಂಗಪ್ಪ |
| | ಶ್ರೀ ಬಿ. ಹೊನ್ನಪ್ಪ |
| | ಶ್ರೀ ಕಲೀರಪ್ಪ |
| | ಶ್ರೀ ಬಿ. ಸಿದ್ಧಲಿಂಗಯ್ಯ |
| ಟಿ. ದಾಸರಹಳ್ಳಿ, ಪೀಣ್ಯ ಮತ್ತು ಯಶವಂತಪುರ | ಶ್ರೀ ಡಿ.ಕೆ. ಪ್ರಭುದೇವಯ್ಯ |
| | ಶ್ರೀ ಹೆಚ್.ಆರ್. ನಂಜುಂಡಪ್ಪ |
| | ಶ್ರೀ ಪಿ. ಕೆಂಪಹೊನ್ನಯ್ಯ |
| ಮಲ್ಲೇಶ್ವರಂ | ಶ್ರೀ ವಿ. ಶಿವರುದ್ರಯ್ಯ |
| ಇಂದಿರಾನಗರ | ಶ್ರೀ ವಿ.ಸಿ. ಪರಮಶಿವಯ್ಯ |
| ಯಲಹಂಕ ಉಪನಗರ | ಶ್ರೀ ಟಿ.ಎಸ್. ಸಚ್ಚಿದಾನಂದ |
| ವಿಲ್ಸನ್ ಗಾರ್ಡನ್ | ಶ್ರೀ ಪಿ.ಎಸ್. ಶಿವಲಿಂಗಯ್ಯ |
| | ಶ್ರೀ ಮಲ್ಲಿಕಾರ್ಜುನಯ್ಯ |
| ಜ್ಞಾನಭಾರತಿ | ಶ್ರೀ ಕೆ.ಬಿ. ಗಂಗಣ್ಣ |
| | ಶ್ರೀ ಆರ್.ಎಸ್. ಹುಚ್ಚಾಚಾರಿ |

ಶ್ರೀಮತಿ ನೀಲಾಂಬಿಕೆಯವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಆರಂಭವಾಯಿತು. ಶ್ರೀ ಎಂ. ಶಿವಣ್ಣನವರು ಸ್ವಾಗತಿಸಿದರು. 'ಮಹಾಮನೆ' ಸಂಪಾದಕ ಹಾಗೂ ಸಿದ್ಧಗಂಗಾ ಮಾಸಪತ್ರಿಕೆಯ ಸಹಸಂಪಾದಕ ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರು ಕಾರ್ಯಕ್ರಮ ನಿರ್ವಹಣೆ ಮಾಡಿದರು. ಕೊನೆಯಲ್ಲಿ ಪಂಡಿತ್ ಹನುಮಂತರಾಯಪ್ಪ ಅವರು ಶರಣು ಸಮರ್ಪಣೆ ಮಾಡಿದರು. □





ಬೆಂಗಳೂರು ಗ್ರಾಮಾಂತರ ಜಿಲ್ಲೆ

## ಕುರುವೇಲು ತಿಮ್ಮೇನಹಳ್ಳಿಯಲ್ಲಿ ಆಂಜನೇಯಸ್ವಾಮಿ ಜೀರ್ಣೋದ್ಧಾರ ದೇವಸ್ಥಾನದ ಉದ್ಘಾಟನೆ




ಪರಮಪೂಜ್ಯ ಶ್ರೀಶ್ರೀಗಳವರಿಂದ ಅನುಗ್ರಹ ಭಾಷಣ

ಆಗಸ್ಟ್ ೧೩ರ ಭಾನುವಾರ ನೆಲಮಂಗಲ ತಾಲ್ಲೂಕು ಕುರುವೇಲು ತಿಮ್ಮೇನಹಳ್ಳಿಯಲ್ಲಿ. ಸಂತಸ, ಸಡಗರ, ಹಬ್ಬದ ವಾತಾವರಣ. ಸುತ್ತಮುತ್ತಲಿನ ಗ್ರಾಮಗಳ ಜನರು ಈ ಸಡಗರದಲ್ಲಿ ಪಾಲುಗೊಂಡಿದ್ದರು.. ಸಂದರ್ಭ ಶ್ರೀಕ್ಷೇತ್ರದ ಹಳೆ ವಿದ್ಯಾರ್ಥಿ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲಾ ಪರಿಷತ್ತಿನಲ್ಲಿ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಕೆ.ಎನ್. ಗೋವಿಂದರಾಜು ಮತ್ತು ಸಹೋದರರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ 94ನೇ ಹುಟ್ಟುಹಬ್ಬದ ಸವಿನೆನಪಿಗಾಗಿ ಜೀರ್ಣೋದ್ಧಾರ ಮಾಡಿರುವ ಆಂಜನೇಯಸ್ವಾಮಿ ದೇವಾಲಯದ ಉದ್ಘಾಟನಾ ಸಮಾರಂಭ ಪರಮಪೂಜ್ಯ ಶ್ರೀಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಅಭೂತ ಪೂರ್ವವಾಗಿ ನಡೆಯಿತು. ಅಪಾರ ಜನಸ್ತೋಮ ಪರಮಪೂಜ್ಯ ಶ್ರೀಶ್ರೀಗಳವರ ದರ್ಶನಭಾಗ್ಯಪಡೆದು ಪುನೀತರಾದರು. ಭಕ್ತಿಪರವಶರಾಗಿ ನಮಸ್ಕರಿಸಿ ಧನ್ಯತೆಯನ್ನು ಪಡೆದರು.

ಪ್ರಾರಂಭದಲ್ಲಿ ಪ್ರಾಸ್ತಾವಿಕ ನುಡಿಗಳನ್ನಾಡಿದ ಶ್ರೀ ಕೆ.ಎನ್. ಗೋವಿಂದರಾಜು ಅವರು ಪರಮಪೂಜ್ಯ ಶ್ರೀಶ್ರೀಗಳವರ ನಿಸ್ವಾರ್ಥ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಿ ಶ್ರೀಮಠ, ಶ್ರೀಗಳವರ ಕೃಪಾಶೀರ್ವಾದದ ಭಾಗ್ಯ ತನಗೆ ದೊರೆಯದಿದ್ದರೆ ನಾನಿಂದು ಒಬ್ಬ ಬಡ ಕಾರ್ಮಿಕನಾಗಿ ಇರಬೇಕಾಗಿತ್ತು. ಅವರ ಅನುಗ್ರಹದಂತೆ ಈ ಮಟ್ಟಕ್ಕೆ ಬಂದೆ ಎಂದು ಹೇಳುವಾಗ ಅವರ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಹೃದಯಾಂತರಾಳದಿಂದ ಬಂದ ಕೃತಜ್ಞತಾಪೂರ್ವಕ ನುಡಿಗಳು ಸಭಿಕರ ಹೃದಯವನ್ನು ತಟ್ಟಿತ್ತು, ಮುಟ್ಟಿತ್ತು.



ಶ್ರೀ ಕೆ.ಎನ್. ಗೋವಿಂದರಾಜು ಅವರಿಂದ ಪ್ರಾಸ್ತಾವಿಕ ನುಡಿ

ಅವರು ತಮ್ಮ ತಂದೆ-ತಾಯಿಗಳ ಬಯಕೆಯಂತೆ ನಮ್ಮ ಊರಿನ ಶಿಥಿಲಾವಸ್ಥೆಯಲ್ಲಿರುವ ಪುರಾತನ ದೇವಾಲಯವಾದ ಆಂಜನೇಯಸ್ವಾಮಿ ದೇವಾಲಯವನ್ನು ಪರಮಪೂಜ್ಯ ಶ್ರೀಶ್ರೀಗಳವರ ೯೪ನೇ ಹುಟ್ಟುಹಬ್ಬದ ಸವಿನೆನಪಿಗಾಗಿ ಜೀರ್ಣೋದ್ಧಾರ ಮಾಡಿ ಪರಮಪೂಜ್ಯ ಶ್ರೀಶ್ರೀಗಳವರಿಂದಲೇ ಉದ್ಘಾಟನೆಯಾಗುತ್ತಿರುವುದು ನಮ್ಮೆಲ್ಲರ ಸೌಭಾಗ್ಯ. ಅವರ ಪಾದಸ್ಪರ್ಶದಿಂದ ನಮ್ಮ ಊರು ಪಾವನವಾಯಿತು ಎಂದು ಹೇಳಿದರು.



ಶ್ರೀ ಕೆ.ಎನ್. ಗೋವಿಂದರಾಜು ಅವರಿಂದ ಪ್ರಾಸ್ತಾವಿಕ ನುಡಿ

ಮುಖ್ಯ ಅತಿಥಿಗಳಾಗಿ ಕೊರಟಗೆರೆ ಶಾಸಕ ಶ್ರೀ ಸಿ. ಚನ್ನಿಗಪ್ಪ ಹಾಗೂ ತುಮಕೂರು ಶಾಸಕ ಶ್ರೀ ಎಸ್. ಶಿವಣ್ಣ ಅವರು ಆಗಮಿಸಿದ್ದರು. ಅವರು ತಮ್ಮ ಭಾಷಣದಲ್ಲಿ ಪರಮ ಪೂಜ್ಯ ಶ್ರೀಶ್ರೀಗಳವರು ದೀನದಲಿತರಿಗೆ, ಹಿಂದುಳಿದವರ ಪ್ರಗತಿಗೆ ಸಲ್ಲಿಸುತ್ತಿರುವ ಸೇವೆ ಅನನ್ಯ. ಅವರ ಆದರ್ಶದ ಮುಂಬೆಳಕಿನಲ್ಲಿ ನಮ್ಮ ಭವಿಷ್ಯವನ್ನು ರೂಪಿಸಿಕೊಳ್ಳೋಣ ಎಂದು ತಿಳಿಸಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯಿತಿ ಅಧ್ಯಕ್ಷರಾದ



ಶ್ರೀ ಕೆ.ಎನ್. ಗೋವಿಂದರಾಜು ಮತ್ತು ಅವರ ಕುಟುಂಬದವರು

ಶ್ರೀ ಜಿ. ನರಸಿಂಹಸ್ವಾಮಿ ಅವರು ಮಾತನಾಡಿ, ಪರಮಪೂಜ್ಯರು ನಮಗೆಲ್ಲ ಪ್ರಾಮಾಣಿಕವಾಗಿ ಬದುಕಲು ಆಶೀರ್ವಾದ ನೀಡಬೇಕೆಂದು ಕೇಳಿಕೊಂಡರು.

ದಿವ್ಯ ಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀಶ್ರೀಗಳವರು ತಮ್ಮ ಅನುಗ್ರಹ ನುಡಿಗಳಲ್ಲಿ, 'ಎಲ್ಲಾ ಧರ್ಮಗಳಿಗಿಂತ ಮಾನವಧರ್ಮ ತುಂಬಾ ದೊಡ್ಡದು. ಮಾನವ ಮಾನವನಾಗಿ ಬಾಳುವೆ ಮಾಡುವ ಕಲೆಯೇ ಜೀವನಕಲೆ. ಮಾನವ ಮಾನವರ ಮಧ್ಯೆ ಸಹಜ ಪ್ರೀತಿ, ಪ್ರೇಮ, ವಾತ್ಸಲ್ಯ ಬೆಳೆಸಿಕೊಳ್ಳಬೇಕು. ಅಸೂಯೆ, ದುಶ್ಚಟಗಳು ದೂರವಾಗಬೇಕು. ಉಪಕಾರಸ್ಮರಣೆ, ಕೃತಜ್ಞತಾ ಭಾವನೆ, ಸಹಕಾರ ಚಿಂತನೆಯನ್ನು ಬೆಳೆಸಿಕೊಳ್ಳಬೇಕು ಎಂದು ನುಡಿದ ಶ್ರೀಶ್ರೀಗಳವರು, ಗೋವಿಂದರಾಜು ಶ್ರೀಮಠದಿಂದ ಕಿಂಚಿತ್ ಉಪಕಾರ ಪಡೆದು ಅದನ್ನು ತನ್ನ ದಾರಿದೀಪವನ್ನಾಗಿ ಮಾಡಿಕೊಂಡಿದ್ದಾನೆ. ಅವನು ಉಪಕಾರ ಸ್ಮರಣೆ ಉಳ್ಳವನಾಗಿದ್ದಾನೆ. ಅವನಿಗೆ ಪರಮಾತ್ಮ ಸದ್ಬುದ್ಧಿಯನ್ನು ಕರುಣಿಸಲಿ' ಎಂದು ಆಶೀರ್ವದಿಸಿದರು.

ಸಮಾರಂಭಕ್ಕೆ ಮುನ್ನ ಪರಮಪೂಜ್ಯರನ್ನು ಮೆರವಣಿಗೆಯಲ್ಲಿ ಕರೆತರಲಾಯಿತು. ಶ್ರೀ ಕೆ.ಎನ್. ಗೋವಿಂದರಾಜು ಮತ್ತು ಅವರ ಕುಟುಂಬವರ್ಗದವರು ಪಾದಪೂಜೆ ಮಾಡಿ ಆಶೀರ್ವಾದ ಪಡೆದರು.

ವ್ಯವಸ್ಥಿತವಾಗಿ ನಡೆದ ಸಮಾರಂಭವು ಹಳೆಯ ವಿದ್ಯಾರ್ಥಿ ಸಂಘದ ಕಾರ್ಯದರ್ಶಿ ಶ್ರೀ ಕೆ.ಎಚ್. ಶಿವರುದ್ರಯ್ಯ ಅವರ ಶರಣು ಸಮರ್ಪಣೆಯೊಂದಿಗೆ ಮುಕ್ತಾಯವಾಯಿತು. ಸಮಾರಂಭದ ನಂತರ ದಾಸೋಹ ವ್ಯವಸ್ಥೆ ಮಾಡಲಾಗಿತ್ತು.

ವರದಿ : ಕೆ.ಎಚ್. ಶಿವರುದ್ರಯ್ಯ





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರಸಂ. ಹೆಸರು ಮತ್ತು ವಿಳಾಸ | ಮೊತ್ತ |
|---|---|
| ೨೭೫. **ಶ್ರೀ ಎನ್.ಎಂ. ಮಲ್ಲಿಕಾರ್ಜುನಪ್ಪ**<br>ನಂ. ೧೨/೪-೧,<br>ಲೋಕ ರಂಜನ್ ಮಹಲ್ ರಸ್ತೆ,<br>ಇಟ್ಟಿಗೆಗೂಡು, ಮೈಸೂರು-೫೭೦ ೦೧೦. | ೧,೦೦೦-೦೦<br>(೧ನೇ ಕಂತು) |
| ೨೭೬. **ಶ್ರೀ ಆರ್. ನಟರಾಜ್**<br>ತಂದೆ ಕೆ.ಎಂ. ರೇವಣಸಿದ್ದಯ್ಯ,<br>ನಂ. ೪೫೯, ೧೨ನೇ ಮೇನ್,<br>ಸರಸ್ವತಿಪುರಂ, ಮೈಸೂರು - ೫೭೦ ೦೦೯ | ೧,೦೦೧-೦೦<br>(೧ನೇ ಕಂತು) |
| ೨೭೭. **ಶ್ರೀ ನಟರಾಜ್ ಮತ್ತು ಕುಟುಂಬವರ್ಗ**<br>ಧರ್ಮಪುರಿ, ತಮಿಳುನಾಡು. | ೨,೦೦೦-೦೦ |
| ೨೭೮. **ಶ್ರೀ ಮಲ್ಲಿಕಾರ್ಜುನಯ್ಯ**<br>ವಿಜಯನಗರ,<br>ಬೆಂಗಳೂರು-೫೬೦ ೦೪೦ | ೧೦,೦೦೦-೦೦ |
| ೨೭೯. **ಪ್ರಾಂಶುಪಾಲರು, ಸಿಬ್ಬಂದಿ ಮತ್ತು**<br>**2ನೇ ವರ್ಷದ ಪಿ.ಯು.ಸಿ. ವಿದ್ಯಾರ್ಥಿಗಳು**<br>ಎಸ್.ವಿ.ಆರ್. ಜೂನಿಯರ್ ಕಾಲೇಜು,<br>ನಿಟ್ಟೂರು, ಗುಬ್ಬಿ ತಾಲ್ಲೂಕು. | ೩,೫೦೦-೦೦ |
| ೨೮೦. **ಸಂಚಾಲಕರು, ಸಂಯುಕ್ತ ವಿದ್ಯಾರ್ಥಿಸಂಘ**<br>ಶ್ರೀ ಸಿದ್ಧಗಂಗಾ ಸನಿವಾಸ ಶೈಕ್ಷಣಿಕ ಸಂಸ್ಥೆಗಳು,<br>ಶ್ರೀ ಸಿದ್ಧಗಂಗಾ ಮಠ. | ೧೦,೦೦೦-೦೦ |
| ೨೮೧. **ಶ್ರೀ ಜಿ.ಎಂ. ರೇಣುಕಾರಾಧ್ಯ**<br>ಸಹ ಶಿಕ್ಷಕರು, ಶ್ರೀ ರಂಗನಾಥ ಪ್ರೌಢಶಾಲೆ,<br>ಕಲ್ಕುಂಟೆ, ದ್ವಾರಾ ಕಾಡುಗೋಡಿ,<br>ಬೆಂಗಳೂರು-೫೬೦ ೦೬೭ | ೧,೦೦೧-೦೦<br>(೧ನೇ ಕಂತು) |
| ೨೮೨. **ಶ್ರೀಮತಿ ಸುಭದ್ರಮ್ಮ**<br>ನಂ. ೯೩, ೩ನೇ ಕ್ರಾಸ್,<br>೭ನೇ ಬ್ಲಾಕ್, ಹೊಸಕೆರೆಹಳ್ಳಿ,<br>ಬೆಂಗಳೂರು-೫೬೦ ೦೮೫ | ೧,೦೦೧-೦೦<br>(೧ನೇ ಕಂತು) |
| ೨೮೩. **ಶ್ರೀ ಸಿ. ಶಿವಮೂರ್ತಿ ಮತ್ತು ಸಹೋದರರು,**<br>ನಂ. ೬೫೫, ೬ನೇ ಕ್ರಾಸ್,<br>೮ನೇ ಮೇನ್, ಆರ್.ಪಿ.ಸಿ. ಲೇಔಟ್,<br>ವಿಜಯನಗರ ೨ನೇ ಘಟ್ಟ,<br>ಬೆಂಗಳೂರು-೪೦ | ೨೦,೦೦೧-೦೦ |
| ೨೮೪. **ಶ್ರೀ ಶಿವಲಿಂಗಾರಾಧ್ಯ**<br>ತಂದೆ ಶ್ರೀ ಪರಮೇಶ್ವರಯ್ಯ,<br>ಹಾರನಹಳ್ಳಿ ಅಂಚೆ,<br>ಅರಸೀಕೆರೆ ತಾಲ್ಲೂಕು,<br>ಹಾಸನ ಜಿಲ್ಲೆ. | ೨,೦೦೧-೦೦ |
| ೨೮೫. **ಶ್ರೀ ಹನುಮಣ್ಣ**<br>ತಂದೆ ದಿ॥ ಚಿನ್ನಪ್ಪ<br>ರ್‍ಯಾಪ್ಟೆ, ಹುಸೇನಪುರ ಅಂಚೆ,<br>ಪಾವಗಡ ತಾಲ್ಲೂಕು,<br>ತುಮಕೂರು ಜಿಲ್ಲೆ | ೨,೦೦೧-೦೦ |
| ೨೮೬. **ಶ್ರೀ ಎನ್.ಆರ್. ಸಿದ್ದಪ್ಪ**<br>ನಂ. ೫೮, ಸುಬೇದಾರ್ ಛತ್ರಂ ರಸ್ತೆ,<br>ಬೆಂಗಳೂರು-೦೯. | ೫,೦೦೧-೦೦ |
| ೨೮೭. **ಶ್ರೀ ಆರ್. ವೀರಣ್ಣ,**<br>ಶಿಕ್ಷಕರು,<br>ತೋವಿನಕೆರೆ ಅಂಚೆ-೫೭೨೧೩೦ | ೧,೫೦೧-೦೦ |
| ೨೮೮. **ಶ್ರೀ ಬಿ. ಶಾಂತರಾಜು**<br>ಕಾಫಿ ಬೆಳೆಗಾರರು,<br>ಬಿ.ಎಂ. ರಸ್ತೆ, ಸಕಲೇಶಪುರ,<br>ಹಾಸನ ಜಿಲ್ಲೆ. | ೨,೦೩೦-೦೦ |
| ೨೮೯. **ಶ್ರೀ ಎನ್. ಸೋಮಶೇಖರಾರಾಧ್ಯ**<br>ನಂ. ೩೫೬, ೩ನೇ ವಿಭಾಗ,<br>ಡೀವಂತಿ ಪೆಸ್, ಚಿಕ್ಕಬಳ್ಳಾಪುರ-೫೬೨ ೧೦೧.<br>ಕೋಲಾರ ಜಿಲ್ಲೆ. | ೧,೦೦೧-೦೦<br>(೧ನೇ ಕಂತು) |
| ೨೯೦. **ಶ್ರೀ ಕೆ.ಎನ್. ಮಲ್ಲೇಗೌಡ**<br>ಕಾಫಿ ಬೆಳೆಗಾರರು,<br>ದಿವ್ಯ ಎಸ್ಟೇಟ್, ಆಲೂರು ತಾಲ್ಲೂಕು,<br>ರಾಯರಕೊಪ್ಪಲು-೫೭೧ ೧೨೯. ಹಾಸನ ಜಿಲ್ಲೆ. | ೧೦,೦೦೧-೦೦ |
| ೨೯೧. **ಶ್ರೀ ಬಿ.ಹೆಚ್. ವಿರೂಪಾಕ್ಷ**<br>ತಂದೆ ಬಿ.ಎಲ್. ಹೊನ್ನಪ್ಪ<br>ಕಾಫಿ ಬೆಳೆಗಾರರು, ಸುಲುಗೋಡು ಎಸ್ಟೇಟ್,<br>ರಾಯರಕೊಪ್ಪಲು ಅಂಚೆ, ಆಲೂರು ತಾಲ್ಲೂಕು,<br>ಹಾಸನ ಜಿಲ್ಲೆ. | ೫,೦೦೧-೦೦ |

(ಮುಂದುವರಿಯುತ್ತದೆ)

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೨೫೧. | **ಶ್ರೀ ಎ.ಎಸ್. ಗುರುಸ್ವಾಮಿ**<br>ದ್ವಿತೀಯ ದರ್ಜೆ ಗುಮಾಸ್ತ,<br>ಶ್ರೀ ಸಿದ್ಧಗಂಗಾ ಪ್ರೌಢಶಾಲೆ, ಜಂಗಮಮಠ,<br>ಶಿವನಗರ, ಬೆಂಗಳೂರು-೧೦ | ೧,೦೦೧-೦೦ |
| ೨೫೨. | **ಶ್ರೀ ಬಿ.ಎನ್. ಸಿದ್ಧಲಿಂಗಯ್ಯ**<br>ಅಟೆಂಡರ್, ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ಜಂಗಮಮಠ, ಶಿವನಗರ,<br>ಬೆಂಗಳೂರು-೧೦ | ೧,೦೦೧-೦೦ |
| ೨೫೩. | **ಶ್ರೀ ಹೊನ್ನಪ್ಪ,**<br>ಅಟೆಂಡರ್, ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ಜಂಗಮಮಠ, ಶಿವನಗರ,<br>ಬೆಂಗಳೂರು-೧೦ | ೧,೦೦೧-೦೦ |
| ೨೫೪. | **ಶ್ರೀಮತಿ ಸರ್ವಮಂಗಳಮ್ಮ**<br>ಅಟೆಂಡರ್, ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ಜಂಗಮಮಠ, ಶಿವನಗರ,<br>ಬೆಂಗಳೂರು-೧೦ | ೧,೦೦೧-೦೦ |
| ೨೫೫. | **ಶ್ರೀ ಚನ್ನಬಸಪ್ಪ,**<br>ಕನ್ನಡ ಪ್ರಾಧ್ಯಾಪಕರು ಮತ್ತು<br>ಇಲಾಖಾ ಮುಖ್ಯಸ್ಥರು,<br>ಕಲ್ಪತರು ಕಾಲೇಜು, ತಿಪಟೂರು. | ೧,೦೦೯-೦೦ |
| ೨೫೬. | **ಡಾ. ಎಸ್. ಪರಮೇಶ್ವರಯ್ಯ**<br>ಪ್ರೊಫೆಸರ್ ಮತ್ತು ಮುಖ್ಯಸ್ಥರು,<br>ಪೆಥಾಲಜಿ ವಿಭಾಗ,<br>ಕೆ.ಎಸ್. ಹೆಗ್ಗಡೆ ಮೆಡಿಕಲ್ ಅಕಾಡೆಮಿ,<br>ದೇರಲಕಟ್ಟೆ-೫೭೪ ೧೬೦<br>ಮಂಗಳೂರು. | ೧,೦೦೧-೦೦ |
| ೨೫೭. | **ಶ್ರೀಮತಿ ಅನಸೂಯ ಪ್ರಸಾದ್**<br>ಕೋಂ. ಹೆಚ್.ಆರ್. ಪ್ರಸಾದ್,<br>ಕಾಫಿ ಬೆಳೆಗಾರರು, ಅನುಪಮ ಎಸ್ಟೇಟ್,<br>ಹಲಸುಲಿಗೆ, ಸಕಲೇಶಪುರ-೫೭೩೧೩೪ | ೧,೦೦೧-೦೦ |
| ೨೫೮. | **ಶ್ರೀ ಜೆ. ವಿವೇಕಾನಂದಮೂರ್ತಿ**<br>ನಂ. ೨೫೯, ೨ನೇ ಮುಖ್ಯರಸ್ತೆ,<br>೩ನೇ ಕ್ರಾಸ್, ಶಿವನಗರ,<br>ಬೆಂಗಳೂರು-೫೬೦ ೦೧೦. | ೧,೧೦೧-೦೦ |
| ೨೫೯. | **ಶ್ರೀಮತಿ ಹೆಚ್.ವಿ. ಪಾರ್ವತಮ್ಮ**<br>ಕೋಂ. ಲೇಟ್ ಚನ್ನಬಸಪ್ಪ<br>ನಂ. ೫೪೩, ೫ನೇ ಅಡ್ಡರಸ್ತೆ,<br>ಮಹಾಲಕ್ಷ್ಮಿ ಲೇಔಟ್,<br>ಬೆಂಗಳೂರು-೫೬೦ ೦೮೬. | ೧,೦೦೧-೦೦ |
| ೨೬೦. | **ಶ್ರೀ ಕೆ.ಬಿ. ಶಿವಗಂಗಣ್ಣ**<br>ನಂ. ೧೧, ಪಾಪಯ್ಯ ಗಾರ್ಡನ್,<br>ಕೆ.ಎಚ್.ಬಿ. ಕಾಲೋನಿ, ೨ನೇ ಹಂತ,<br>ಬಸವೇಶ್ವರ ನಗರ,<br>ಬೆಂಗಳೂರು-೫೬೦ ೦೭೯. | ೫,೦೦೧-೦೦ |
| ೨೬೧. | **ಶ್ರೀ ರೇವಣಸಿದ್ಧಯ್ಯ**<br>ನಂ. ೨೪೮, ೪ನೇ ಮುಖ್ಯರಸ್ತೆ,<br>೨ನೇ ಬ್ಲಾಕ್, ೩ನೇ ಹಂತ,<br>ಬಸವೇಶ್ವರನಗರ,<br>ಬೆಂಗಳೂರು-೫೬೦ ೦೭೯ | ೧,೦೨೧-೦೦ |
| ೨೬೨. | **ಶ್ರೀಮತಿ ಪಿ.ಹೆಚ್. ರುದ್ರಾಣಿ**<br>ಕೋಂ. ಶ್ರೀ ಬಸವರಾಜಯ್ಯ,<br>ನಂ. ೪೫೦/೪, ೯ನೇ 'ಡಿ' ಮುಖ್ಯರಸ್ತೆ,<br>ವಿಜಯನಗರ,<br>ಬೆಂಗಳೂರು-೫೬೦ ೦೪೦ | ೧,೦೦೧-೦೦ |
| ೨೬೩. | **ಲಿ|| ಟಿ.ವಿ. ಮಂಗಳಮ್ಮ**<br>ಇವರ ಹೆಸರಿನಲ್ಲಿ ಶ್ರೀ ವಿ. ನಂಜಪ್ಪ,<br>೪ನೇ ಮುಖ್ಯರಸ್ತೆ,<br>ವಿನಾಯಕನಗರ, ತುಮಕೂರು. | ೧,೦೦೧-೦೦ |
| ೨೬೪. | **ಶ್ರೀ ವಿ. ಶಿವರುದ್ರಯ್ಯ**<br>ನಂ. ೨೦೭, ೪ನೇ ಮುಖ್ಯರಸ್ತೆ,<br>೪ನೇ ಕ್ರಾಸ್, ಶ್ರೀನಗರ,<br>ಬೆಂಗಳೂರು-೫೬೦ ೦೫೦ | ೧,೦೦೧-೦೦ |
| ೨೬೫ | **ಶ್ರೀ ಬಸವಣ್ಣ**<br>ತಂದೆ ಇ. ನೀಲಕಂಠಯ್ಯ,<br>ನಂ. ೧೨೨, ೬ನೇ ಮುಖ್ಯರಸ್ತೆ,<br>೫ನೇ ಕ್ರಾಸ್, ಆರ್.ಪಿ.ಸಿ. ಲೇಔಟ್,<br>ವಿಜಯನಗರ, ಬೆಂಗಳೂರು-೪೦ | ೧,೦೦೧-೦೦ |

(ಮುಂದುವರಿಯುತ್ತದೆ)

